# ಮಾನಸಿ

ತಿಂಗಳ ಪತ್ರಿಕೆ

ಸಂಪುಟ ೨ ಸಂಚಿಕೆ ೪



# ಮಾನಸ

ಸಂಪುಟ : ೨     ಸಂಚಿಕೆ : ೪

ಮೇ  ೧೯೮೯



**ಸಂಪಾದಕೀಯ ಮಂಡಳಿ**

ರಾಜೇಶ್ವರಿ ಎಚ್ ಎಸ್;  ಸರಸ್ವತಿ ದು, ಚಂಪಾವತಿ ಎಚ್. ಎಸ್,  ವೇದ, ಸವಿತ ಎ.  ಗೀತಾ ಜಿ. ಎಸ್.

**ಸಲಹೆ—ಸಹಕಾರ**

ವಿಜಯ



**ವಿಳಾಸ "ಮಾನಸ ತಿಂಗಳ ಪತ್ರಿಕೆ"**

ಪಂಚಾಯತಿ ರಸ್ತೆ

ಕಾಡುಗೋಡಿ ( ಪೋ )

ಬೆಂಗಳೂರು—**560-067.**



**ಸೂಚನೆ :** ವಾರ್ಷಿಕ ಚಂದಾ : **15**ರೂ

ಆಜೀವ ಚಂದಾ **250** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ ಒಟ್ಟು ಹನ್ನೊಂದು ಸಂಚಿಕೆಗಳು.

ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ. ಮೂಲಕ ಸ್ವೀಕರಿಸಲಾಗುವುದು.


## ಈ ಸಂಚಿಕೆಯಲ್ಲಿ ...........



## ಸಂಪಾದಕೀಯ

ಮನೆಗೆಲಸಕ್ಕೆ ಉಪಯುಕ್ತ ಮೌಲ್ಯವಿದೆಯೇ ಆರ್ಥಿಕ ಮೌಲ್ಯವಿದೆಯೇ ಅಥವಾ ವಿನಿಮಯ ಮೌಲ್ಯವಿದೆಯೇ — ಈ ತರಹ ತಾತ್ವಿಕ ಪ್ರಶ್ನೆಗಳು ಗಂಭೀರವಾಗಿ ತಲೆ ಎತ್ತುತ್ತಿರುವಾಗಲೇ ನಮ್ಮ ಸುತ್ತ ಕಾಣುವ ಪರಿಸರದಲ್ಲಿ ನಾವು ವಿಪರ್ಯಾಸ ಕಾಣುತ್ತೇವೆ. ಸಂಘಟಿತ ಕ್ಷೇತ್ರಗಳಲ್ಲಿ ದುಡಿಯುವ ಮಹಿಳೆಯರಿಗೆ ಬಂಡವಾಳಶಾಹಿಗಳು ಸಾಮೂನ್ಯೀಕೃತ ಅಡಿಗೆ ಮನೆಗಳನ್ನು ನಿರೂಪಿಸಬೇಕೆಂಬ ಅಥವಾ ದುಡಿಯುವ ಮಹಿಳೆಯರು ಪ್ರತ್ಯೇಕ ಪ್ರತ್ಯೇಕವಾಗಿ ಎಲ್ಲಾ ಕೆಲಸಗಳನ್ನು ಮಾಡುವ ಬದಲು ಒಟ್ಟಾಗಿ ಆರ್ಥಿಕ ಮೌಲ್ಯದ ಹಂತದಲ್ಲಿ ಈ ಕೆಲಸಗಳನ್ನು ಒಂದು ಕಡೆ ವ್ಯವಸ್ಥಿತಗೊಳಿಸಬೇಕು ಎಂಬ ಪರ್ಯಾಯ ಯೋಜನೆಗಳಿದ್ದಾಗ್ಯೂ ಸಹ ಇವು ಈ ಕ್ಷಣದಲ್ಲಿ ಕಾರ್ಯಗತಗೊಳ್ಳಬಹುದೆ? ಇವುಗಳ ಸ್ವರೂಪ ಹೇಗಿರಬೇಕೆಂಬ ಪ್ರಶ್ನೆ ಇನ್ನೂ ಗೊಂದಲಮಯವಾಗಿದೆ. ಈ ಹಂತದಲ್ಲಿ "ಕುಟುಂಬ"ದ ರಚನೆ ಹೇಗಿರಬೇಕು? ಅದರ ಸ ರೂಪ ಇತ್ಯಾದಿಗಳು ಇನ್ನೂ ಕೂಡಾ ಚರ್ಚಿತವಾಗಬೇಕು. ಈ ಧೋರಣೆ, ಗುರಿಗಳು ನಮ್ಮದಾಗಿದ್ದಾಗ್ಯೂ, ಈ ಕ್ಷಣದಲ್ಲಿ ಕುಟುಂಬಗಳಲ್ಲಿನ ಗಂಡಸರು ಮನಸಾರೆ ಈ ಕೆಲಸಗಳ ಅಗತ್ಯ ಹಾಗೂ ಏಕತಾನತೆಯನ್ನು ಅರಿಯಬೇಕಾಗಿದೆ. ಈ ಕೆಲಸಗಳನ್ನು ಮಾಡುವುದು ಮುಖ್ಯವಲ್ಲ ಎಂದಾಗಲೀ, ಕೀಳುದರ್ಜೆಯೆಂದು ಭಾವಿಸುವುದಾಗಲೀ, ಅಥವ ಈ ಬಗ್ಗೆ ಸೆನ್ಸಿಬಿಲಿಟಿ ಬೆಳೆಸಿಕೊಳ್ಳದಿದ್ದಾಗ ಕುಟುಂಬಗಳಲ್ಲಿನ ಪುರುಷ ಸ್ತ್ರೀಯರ ಸಂಬಂಧಗಳಲ್ಲಿ ಘರ್ಷಣೆಗಳುಂಟಾಗಬಹುದು. ಊಟ. ತಿಂಡಿ ಕಸ — ಮುಸುರೆ, ಮಕ್ಕಳ ಲಾಲನೆ — ಪಾಲನೆಗಳಲ್ಲಿನ ಏಕತಾನತೆ ಒಪ್ಪಿಕೊಂಡು ವ್ಯವಸ್ಥಿತವಾಗಿ ಹಂಚಿಕೊಳ್ಳದಿದ್ದರೆ, ಕುಟುಂಬಗಳಲ್ಲಿನ ಸ್ತ್ರೀ - ಪುರುಷರ ಸಂಬಂಧಗಳು ಶಿಥಿಲಗೊಳ್ಳಬಹುದು. ಒಟ್ಟಾಗಿ ಮುಂದಿನ ಯೋಜನೆಗಳಿಗೆ ಹೊರಡುವ ಹಂತದಲ್ಲಿ ಮನೆಗೆಲಸದ ಹೊರೆಯನ್ನು ದುಡಿಯುವ ಪುರುಷ — ಸ್ತ್ರೀಯರು ಹಂಚಿಕೊಳ್ಳುವ ಅಗತ್ಯ ಕಾಳಜಿಯನ್ನು ನಾವೆಲ್ಲ ಗಂಭೀರವಾಗಿ ಪರಿಗಣಿಸಬೇಕು

# " ಬಂಡವಾಳಶಾಹಿತ್ವದ ಪಿತೃಪ್ರಧಾನ ಮೌಲ್ಯಗಳು "
# ಹಾಗೂ ಮಹಿಳಾ ಕಾರ್ಮಿಕರು



**ಇತ್ತೀಚಿನ ವರ್ಷಗಳಲ್ಲಿ ನಾನಾ ಕಾರಣಗಳಿಂದ ಸಂಘಟಿತ ಹಾಗೂ ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಸಂಖ್ಯೆ ಇಳಿಮುಖವಾಗುತ್ತಿದೆ. ನಾನಾ ಕಾರಣಗಳಿಂದ ಹೀಗೆ ಇಳಿಮುಖವಾಗುತ್ತಿರುವ ಈ ಕಾರ್ಮಿಕರ ದುಃಸ್ಥಿತಿಗೆ ಒಟ್ಟಾಗಿ ಪ್ರತಿನಿಧಿತವಾಗುತ್ತಿರುವ ಬಂಡವಾಳಶಾಹಿತ್ವದ - ಪಿತೃಪ್ರಧಾನ ಮೌಲ್ಯಗಳೇ ತಾತ್ವಿಕ ತಳಹದಿ. ಈ ಎರಡೂ ಹೀಗೆ ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುತ್ತವೆ ಎಂಬುದನ್ನು ಕೆಲವು ಕಾರ್ಖಾನೆಗಳ ಐತಿಹಾಸಿಕ ಇತಿಹಾಸಗಳಿಂದ ಇಲ್ಲಿ ವಿವೇಚಿಸಲಾಗಿದೆ.**

೧೯೭೪ರಲ್ಲಿ ಭಾರತ ಸರ್ಕಾರ ಪ್ರಕಟಿಸಿದ ವರದಿ "ಟು ವರ್ಡ್ಸ್ ಈಕ್ವಾಲಿಟಿ" ಮಹಿಳಾ ಕಾರ್ಮಿಕರ ಬಗ್ಗೆ ಅನೇಕ ಮಹತ್ತರವಾದ ವಿಚಾರಗಳ ಮೇಲೆ ಬೆಳಕು ಚೆಲ್ಲಿತು. ಕಡಿಮೆಯಾಗುತ್ತಿರುವ ಮಹಿಳಾ ಸಂಖ್ಯೆಯನ್ನು ಸೂಚಿಸಿದ ಈ ವರದಿ, ಶ್ರಮ ಶಕ್ತಿಯಲ್ಲಿ ಕ್ಷೀಣಿಸುತ್ತಿರುವ ಮಹಿಳೆಯರ ಸಂಖ್ಯೆಯನ್ನೂ ಸಹ ಗಮನಿಸಿತು. ಈ ವರದಿಯ ನಂತರ ೮೦ರ ದಶಕದಲ್ಲಿ ಮಹಿಳಾ ಕಾರ್ಮಿಕರು ಹೆಚ್ಚಿರುವ ಸಾಂಪ್ರದಾಯಕ ಕೈಗಾರಿಕೆಗಳಾದ ತಂಬಾಕು, ಬೀಡಿ, ವಸ್ತ್ರ, ಗಣಿ ಹಗ್ಗ ಹಾಗೂ ಎಲೆಕ್ಟ್ರಾನಿಕ್ಸ್ ಫಾರ್ಮಾಸುಟಿಕಲ್ಸ್ ಮತ್ತು ಉಡುಪುಗಳಂತಹ ಆಧುನಿಕ ಕೈಗಾರಿಕೆಗಳ ಬಗ್ಗೆ ಅನೇಕ ಸಂಶೋಧನೆಗಳು, ವರದಿಗಳು ಪ್ರಕಟವಾದವು. ೧೯೭೪ರ "ಟುವರ್ಡ್ಸ್ ಈಕ್ವಾಲಿಟಿ" ಯ ಪ್ರಕಾರ ಯಾಂತ್ರಿಕೀಕರಣ ಹಾಗೂ ಯಂತ್ರಗಳ ಆಯ್ಕೆಯಿಂದಾಗಿ ಬೃಹತ್ ಕೈಗಾರಿಕೆಗಳಲ್ಲಿ ಮಹಿಳೆಯರು ಹೆಚ್ಚು ನಿರುದ್ಯೋಗಿಗಳಾಗಿದ್ದಾರೆ.

"ಕೆಲವು ನಗರಗಳಲ್ಲಿನ ಕೈಗಾರಿಕೆಗಳಲ್ಲಿ, ಉದ್ಯಮಗಳಲ್ಲಿ, ವ್ಯಾಪಾರಗಳಲ್ಲಿ ಹಾಗೂ ಸಾರ್ವಜನಿಕ ಆಫೀಸ್‌ಗಳಲ್ಲುಂಟಾದ ಯಾಂತ್ರಿಕೀಕರಣದಿಂದ ಕೇವಲ ಹೊಸ ಕಾರ್ಮಿಕರನ್ನು ತೆಗೆದುಕೊಳ್ಳುವುದು ನಿಂತದ್ದಷ್ಟೇ ಅಲ್ಲ, ಇರುವ ಕೆಲಸಗಾರರನ್ನು ಸಹ ವಜಾ ಮಾಡಲಾಯಿತು : [ ಅನುವಾದ ನನ್ನದು : " ಟು ವರ್ಡ್ಸ್ ಈಕ್ವಾಲಿಟಿ", ಇಂಡಿಯಾ ಸರ್ಕಾರ ೧೯೭೪, ಪೇ. ೧೯೯ ]

ಬಹಳಷ್ಟು ಕೈಗಾರಿಕೆಗಳಲ್ಲಿ ಎಲ್ಲೆಲ್ಲಿ ಯಾಂತ್ರಿಕೀಕರಣ ನಡೆದಾಗಲೂ ಅಲ್ಲಿ ಹೆಚ್ಚಾಗಿ ಕೆಲಸ ಕಳೆದುಕೊಂಡವರು ಮಹಿಳಾ ಕಾರ್ಮಿಕರು. ಉತ್ಪಾದನಾ ರಚನೆ ಉತ್ಪಾದನಾ ಸಂಬಂಧಗಳು, ಉದ್ಯೋಗ ಪ್ರತ್ಯೇಕೀಕರಣ, ನೇಮಕಾತಿ ನಿಯಮಗಳು. ರಕ್ಷಣಾ ಕಾಯಿದೆಗಳು, ತಾಯ್ತನದ ಸವಲತ್ತುಗಳನ್ನು ಕುರಿತಾದ ಅನೇಕ ಅಧ್ಯಯನಗಳು, ವರದಿಗಳು ಮಹಿಳಾ ಕಾರ್ಮಿಕರು ಬಲಿಪಶುಗಳಾದುದನ್ನು ಎತ್ತಿ ಹಿಡಿಯುತ್ತವೆ. ( ವಿ. ರಾವ್ ರುಕ್ಮಿಣಿ, ಹುಸೇನ್ ಸಭಾ ೧೯೮೩ ; ವೇಲಾಯುಧನ್ ಮೀರಾ, ಸುಕುಮಾರಮ್, ವಿಮಲ್, ಡಿ. ಎಂ. ಪುಷ್ಪ ೧೯೮೩, ಅಮೃತಾ ಚಾಬ್ಬ ೧೯೮೩, ಡಿ. ಸುಜಾತ, ಬಿ. ರೋಹಿನಿ ೧೯೮೪, ಇಸಾ ಬಾಡ್ ೧೯೮೩, ನಿರ್ಮಲಾ ಬ್ಯಾನರ್ಜಿ ೧೯೮೫, ವಿಮೆನ್ ಸೆಂಟರ್ ೧೯೮೪ ),

ಉದಾಹರಣೆಗೆ, ೧೯೬೧ — ೭೧ರಲ್ಲಿ ಮಹಿಳಾ ಕಾರ್ಮಿಕ ಶಕ್ತಿ ೫೯.೫ ಮಿಲಿಯನ್‌ನಿಂದ ೩೬.೭ ಮಿಲಿಯನ್‌ಗೆ ಇಳಿಯಿತು. ಅಂದರೆ ಶೇ. ೨೮ ರಿಂದ ೧೨.೭ ಗೆ ಇಳಿಯಿತು. ೧೯೭೨ ರಲ್ಲಿ ಶೇ. ೮.೭೩

ಮಾತ್ರ ಮಹಿಳಾ ಕಾರ್ಮಿಕ ಶಕ್ತಿ ಇತ್ತು (ರಾಧಾ ಐಯ್ಯರ್ ೧೯೮೦)

ಕಷ್ಟಪಟ್ಟು ಗಳಿಸಿದ ತಾಯ್ತನದ ಸವಲತ್ತುಗಳು ಕ್ರಷ್ ಮುಂತಾದವುಗಳು ಮಹಿಳಾ ಕಾರ್ಮಿಕರನ್ನು ವಜಾಮಾಡಲು ಅಥವಾ ಅವರನ್ನು ನೇಮಕಾತಿ ಗೊಳಿಸಿಕೊಳ್ಳದಿರುವುದಕ್ಕೆ ಬಳಸಿಕೊಳ್ಳಲಾಗುತ್ತಿದೆ. ರಾತ್ರಿಪಾಳಿ, ತಲೆಯ ಮೇಲೆ ಭಾರ ಹೊರುವ, ಗಣಿಒಳಗೆ ಕೆಲಸ ಮಾಡುವ ವಿಚಾರಗಳಲ್ಲಿ ಇರುವ ರಕ್ಷಣಾ ಕಾಯಿದೆಗಳು ಮಹಿಳಾ ಕಾರ್ಮಿಕರ ಕೆಲಸದ ಹಕ್ಕುಗಳನ್ನೇ ಕಿತ್ತುಕೊಳ್ಳತೊಡಗಿವೆ. ಜೊತೆಗೆ ೧೯೭೬ರಲ್ಲಿ ಜಾರಿಯಾದ ಸಮಾನ ವೇತನದ ಕಾಯಿದೆ ಮಹಿಳಾ ಕಾರ್ಮಿಕರ ನೇಮಕಾತಿಯ ಮೇಲೆ ಋಣಾತ್ಮಕವಾದ ಪ್ರಭಾವವನ್ನು ಬೀರುತ್ತಿವೆ.

ಸಾಂಪ್ರದಾಯಕ ಹಾಗೂ ಆಧುನಿಕ ಕೈಗಾರಿಗಳ ಬಗ್ಗೆ ಮಾಡಿದ ಕೆಲವು ಅಧ್ಯಯನಗಳ ಆಧಾರದ ಮೇಲೆ ಮಹಿಳಾ ಕಾರ್ಮಿಕರ ಸಮಸ್ಯೆಗಳು, ಅವರ ನಡುವಿನ ಸಂಘಟನೆಯ ಕೊರತೆಯನ್ನು ಉತ್ಪಾದನೆಯ ಯಾಂತ್ರೀಕರಣ, ರಕ್ಷಣಾಕಾಯಿದೆಗಳು, ಲಿಂಗಾಧಾರಿತ ಶ್ರಮ ವಿಭಜನೆ, ಅಸಮಾನ ವೇತನ ಹಾಗೂ ಮಹಿಳಾ ಕಾರ್ಮಿಕರ ಸಮಸ್ಯೆಗಳ ಬಗ್ಗೆ ಕಾರ್ಮಿಕ ಸಂಘಟನೆಗಳ ನಿಲುವುಗಳು — ಈ ಹಲವು ಅಂಶಗಳಲ್ಲಿ ಕೆಳಗೆ ಗುರುತಿಸಲು ಪ್ರಯತ್ನಿಸಿದ್ದೇನೆ

**ಯಾಂತ್ರೀಕರಣ:** ಭಾರತದಲ್ಲಿ ೧೯ನೇ ಶತಮಾನದ ಮಧ್ಯಭಾಗದಲ್ಲಿ ಕೈಗಾರಿಕೆಯು ಬೆಳವಣಿಗೆ ಕಂಡುಬಂತು. ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಹತ್ತಿ ಗಿರಣಿ, ಸಣಬು ಹಾಗೂ ಗಣಿ ಉದ್ಯಮ ಈ ಮೂರೂ ವ್ಯವಸಾಯಕ್ಕೆ ಸಂಬಂಧ ಪಡದ ಮೂರು ಬೃಹತ್ ಕೈಗಾರಿಕೆಗಳಾಗಿ ಅಸ್ತಿತ್ವಕ್ಕೆ ಬಂದವು. ಪ್ರಾರಂಭದ ಹಂತದಿಂದಲೂ, ಈ ಮೂರು ಕೈಗಾರಿಕಾ ಕ್ಷೇತ್ರಗಳ ಪ್ರಗತಿಯಲ್ಲಿ ಮಹಿಳೆಯರು ಗಣನೀಯವಾದ ಪಾತ್ರವನ್ನು ವಹಿಸಿದ್ದರು. ೧೯೩೦ರಲ್ಲಿ ಶೇ. ೨೦ ಹತ್ತಿ ಗಿರಣಿಗಳಲ್ಲಿಯೂ, ಶೇ. ೧೫ ಸಣಬು ಕಾರ್ಖಾನೆಗಳಲ್ಲಿಯೂ, ಶೇ. ೩೮ ಗಣಿ ಉದ್ಯಮಗಳಲ್ಲು ಇವರು ಶ್ರಮ ಶಕ್ತಿಯ ಭಾಗವಾಗಿದ್ದರು. ೧೯೩೦ರ ನಂತರದಲ್ಲಿ ಬೃಹತ್ ಕೈಗಾರಿಕೆಗಳು ಮಹಿಳಾ ಕಾರ್ಮಿಕರ ಬಗ್ಗೆ ತಮ್ಮ ನಿಲುವುಗಳನ್ನು ಬದಲಾಯಿಸತೊಡಗಿದರು. ಬೆಳವಣಿಗೆಯ ಹಂತದಲ್ಲಿ ಮಹಿಳ ಕಾರ್ಮಿಕ ಶಕ್ತಿ ಬಳಸಿಕೊಂಡ ಈ ಬೃಹತ್ ಕೈಗಾರಿಗಳು, ತಮ್ಮ ಆರ್ಥಿಕ ಭದ್ರತೆ ಸ್ಥಾಪಿಸಿಕೊಂಡ ನಂತರ ಈ ಮಹಿಳಾ ಕಾರ್ಮಿಕರನ್ನು ನಾನಾ ಕಾರಣಗಳಿಂದ ವಜಾ ಮಾಡಲು ಪ್ರಾರಂಭಿಸಿದರು. ೧೯೭೦ರಲ್ಲಿ ಕೇವಲ ಶೇ. ೨.೫ ಸಣಬು ಕಾರ್ಖಾನೆಗಳಲ್ಲೂ, ಶೇ. ೫ ಗಣಿಗಳಲ್ಲೂ ಶ್ರಮಶಕ್ತಿಯ ಪಾಲನ್ನು ಮಹಿಳಾ ಕಾರ್ಮಿಕರು ಹಂಚಿಕೊಂಡರು.

"ಟೆಕ್ಸ್‌ಟೈಲ್ಸ್" ಭಾರತದ ಅತ್ಯಂತ ಹಳೆಯ ಹಾಗೂ ಬೃಹತ್ತಾದ ಕಾರ್ಖಾನೆ. ಕೈಯಲ್ಲಿ ನೇಯುವ ಹಾಗೂ ನೂಲುವ ಕೆಲಸಗಳು ಹೆಣ್ತನದ ಗೃಹ ಕೈಗಾರಿಕೆಗಳಾದ್ದರಿಂದ. ಮಹಿಳಾ ಕಾರ್ಮಿಕರಿಗೆ ಇಲ್ಲಿ ಸಾಕಷ್ಟು ಅವಕಾಶವಿತ್ತು. ಆದರೆ ವಸಾಹತುಶಾಹಿ ಸಂದರ್ಭದಲ್ಲಿ ಹೊಸ ತಾಂತ್ರಿಕತೆಗೆ ಒಗ್ಗೊಟ್ಟ ಈ ಕೈಗಾರಿಕೆಯು ತನ್ನ ಸಿದ್ಧತೆಯ ಹಂತದಲ್ಲಿ ಮಹಿಳಾ ಕಾರ್ಮಿಕರಿಗೆ ಮುಳುವಾಗಿ ಪರಿಣಮಿಸಿತು.
(ಅಮೃತಾ ಚಾಬ್ಬ ೧೯೮೩, ಇಸಾಬಾದ್ ೧೯೮೩ ವಿಮೆನ್ಸ್ ರೀಸರ್ಚ್ ಸೆಂಟರ್ ೧೯೮೪, ಜಾಬವಾಲ ರೇನಾನಾ ೧೯೮೫)

"ಟೆಕ್ಸ್‌ಟೈಲ್" ನಲ್ಲಿ ನೇಯುವ ಹಾಗೂ ಸುತ್ತುವ ಯಂತ್ರಗಳು ಬಳಕೆಗೆ ಬಂದಾಕ್ಷಣ ಈ ಕೆಲಸದಲ್ಲಿ ಹೆಚ್ಚು ಇದ್ದ ಮಹಿಳಾ ಕಾರ್ಮಿಕರ ಕೆಲಸಗಳು ವಜಾ ಆಗಲ್ಪಟ್ಟವು. ಯಾಂತ್ರೀಕರಣ ಯಾರನ್ನೂ ಕೆಲಸದಿಂದ ತೆಗೆಯದೇ ಕೈಗಾರಿಕೆಯನ್ನು ಉತ್ತಮ ಪಡಿಸಲು ಸಾಧ್ಯವಾಗಬೇಕೆಂಬ ಉದ್ದೇಶ ಸಮರ್ಥಿಸಿಕೊಂಡರೂ, ಆದರೆ ಸಿದ್ಧತೆಯ ಹಂತದಲ್ಲಿ ಬಹಳಷ್ಟು ಮಹಿಳಾ ಕಾರ್ಮಿಕರು ಕೆಲಸ ಕಳೆದುಕೊಂಡದ್ದು ಸತ್ಯ. ೧೯೩೫ರ ನಂತರ ಮಿಲ್ಲುಗಳನ್ನು ಹೆಚ್ಚು ಹೆಚ್ಚಾಗಿ ತೆರೆದರೂ ಸಹ, ಹೊಸ ತಾಂತ್ರಿಕತೆಯಲ್ಲಿ ಹೆಚ್ಚು ಜನ ಮಹಿಳೆಯರನ್ನು ಬಲಿಪಶುಗಳನ್ನಾಗಿಸುವುದು "ಟೆಕ್ಸ್‌ಟೈಲ್" ಕೈಗಾರಿಕಾ ಅಧಿಕಾರ ವರ್ಗಕ್ಕೆ ಅನಿವಾರ್ಯವಾಯಿತು! ಒಂದು "ಕ್ರೈಸಿಸ್" ನಲ್ಲಿ ಟೆಕ್ಸ್‌ಟೈಲ್ ಕಾರ್ಮಿಕ ಸಂಘಟನೆ "ಡೆಲ್ಲಿ ಒಪ್ಪಂದ" ಕ್ಕೆ ಸಹಿ ಹಾಕಿತು. ಈ ಒಪ್ಪಂದದಲ್ಲಿ ಯಾಂತ್ರೀಕರಣ ಇರುವ ಕೆಲಸಗಾರರಿಗೆ ತೊಂದರೆ ಮಾಡುವುದಿಲ್ಲವೆಂದು ಹೇಳಿದ್ದರೂ, ಈ ಹಂತದಲ್ಲಿ ಗಂಡ ಕೆಲಸಗಾರನಾಗಿದ್ದರೆ, ಆತನ ಹೆಂಡತಿ ಮಾತ್ರ ನಿರುದ್ಯೋಗಿಯಾಗುವ ಸಂಭವವಿದೆ ಎಂದು ತಿಳಿಸ

ಲಾಗಿತ್ತು. ಅಂದರೆ ಗಂಡ ಮನೆಯ ಯಜಮಾನನಾಗಿರುವುದರಿಂದ ಆತನ ಸಂಬಳ ಹೆಂಡತಿ ಮಕ್ಕಳನ್ನು ನೋಡಿಕೊಳ್ಳುವುದಕ್ಕಾಗುತ್ತದೆ ಎಂಬುದು ಇದರ ಹಿಂದಿರುವ ತಾತ್ವಿಕ ಪ್ರತಿಪಾದನೆ, ವಿವಾಹಿತ ಮಹಿಳೆಯರ ನಿರುದ್ಯೋಗ ಇವರಿಗೆ ಸಮಸ್ಯೆಯಾಗಿ ಕಾಣಲೇ ಇಲ್ಲ.

ಟೆಕ್ಸ್‌ಟೈಲ್ ಕಾರ್ಮಿಕ ಸಂಘಟನೆ ಹೀಗೆ ನುಡಿಯಿತು —

"ಯಾಂತ್ರಿಕೀಕರಣ ನೂಲುವ ಹಂತದಲ್ಲಿ ಮಾತ್ರ ನಡೆದಿದ್ದು, ಒಪ್ಪಂದವಾದಂತೆ, ಸುಮಾರಾಗಿ ೨೦೦೦ ಕಾರ್ಮಿಕರು ವಜಾ ಆಗಲ್ಪಟ್ಟಿದ್ದಾರೆ. ........ ವಜಾ ಆಗಲ್ಪಟ್ಟ ಬಹುತೇಕ ಕಾರ್ಮಿಕರು ಮಹಿಳಾ ಕಾರ್ಮಿಕರು ......... " (ಅನುವಾದ ನನ್ನದು : ರೇನಾನ ಜಬವಾಲಾ ೧೯೮೫ ಪೇ. ३೦

ಮನೆತನ ನಡೆಸುವುದಕ್ಕಾಗಿ, ಮಕ್ಕಳ ಸೌಲಭ್ಯಕ್ಕಾಗಿ ಎಂಬತಹ ತಾತ್ವಿಕ ನಿಲುವುಗಳೊಂದಿಗೆ ಮಹಿಳಾ ಕಾರ್ಮಿಕರು ಮಿಲ್ಲುಗಳ ಕೆಲಸದಿಂದ ಮನೆಗೆಲಸಕ್ಕೆ ವಾಪಸ್ಸು ಹೋಗುವ ಅಗತ್ಯವನ್ನು ಎತ್ತಿ ಹಿಡಿದ ಟೆಕ್ಸ್‌ಟೈಲ್ ಕಾರ್ಮಿಕ ಸಂಘಟನೆ ಪುರುಷ ಕಾರ್ಮಿಕನ ಸಂಬಳ ಅವನ ಕುಟುಂಬ ನಿರ್ವಹಣೆಗೆ ಆಗುತ್ತದೆ, ಅವ

---

ಮನೆತನ ನಡೆಸುವುದಕ್ಕಾಗಿ, ಎಕ್ಕಳ ಸೌಲಭ್ಯಕ್ಕಾಗಿ ಎಂಬಂತಹ ತಾತ್ವಿಕ ನಿಲುವುಗಳೊಂದಿಗೆ ಮಹಿಳಾ ಕಾರ್ಮಿಕರು ಮಿಲ್ಲುಗಳ ಕೆಲಸದಿಂದ ಮನೆಗೆಲಸಕ್ಕೆ ವಾಪಸ್ಸುಹೋಗುವ ಅಗತ್ಯವನ್ನು ಎತ್ತಿ ಹಿಡಿದ ಟೆಕ್ಸ್‌ಟೈಲ್ ಕಾರ್ಮಿಕ ಸಂಘಟನೆ ಪುರುಷ ಕಾರ್ಮಿಕನ ಸಂಬಳ. ಅವನ ಕುಟುಂಬ ನಿರ್ವಹಣೆಗೆ ಆಗುತ್ತದೆ, ಅವನಿಗೇ ಕೆಲಸದ ಹಕ್ಕು ಎಂಬುದನ್ನು ಎತ್ತಿ ಹಿಡಿಯಿತು. ಹೀಗೆ ಪುರುಷನಿಗೆ ಸಿಗುವುದು 'ಕುಟುಂಬದ ಸಂಬಳ' ಎನ್ನುವಂತಹ ತಾತ್ವಿಕತೆ ಮಹಿಳಾ ಕಾರ್ಮಿಕರನ್ನು ವಾಪಸ್ಸು ಕಳುಹಿಸುವಲ್ಲಿ ಪ್ರಾಮುಖ ಪಾತ್ರ ವಹಿಸಿತು. ಟೆಕ್ಸ್‌ಟೈಲ್ ಅಧಿಕಾರ ವರ್ಗ, ಕಾರ್ಮಿಕ ಸಂಘಟನೆ ಎಡರೂ ಈ ವಿಚಾರ ಧಾರೆಯೆನ್ನು ಹಂಚಿಕೊಡವು.

---

ನಿಗೇ ಕೆಲಸದ ಹಕ್ಕು ಎಂಬುದನ್ನು ಎತ್ತಿ ಹಿಡಿಯಿತು. ಹೀಗೆ ಪುರುಷನಿಗೆ ಸಿಗುವುದು "ಕುಟುಂಬದ ಸಂಬಳ" ಎನ್ನುವಂತಹ ತಾತ್ವಿಕತೆ ಮಹಿಳಾ ಕಾರ್ಮಿಕರನ್ನು ವಾಪಸ್ಸು ಕಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿತು, ಟೆಕ್ಸ್‌ಟೈಲ್ ಅಧಿಕಾರ ವರ್ಗ, ಕಾರ್ಮಿಕ ಸಂಘಟನೆ ಎರಡೂ ಈ ವಿಚಾರಧಾರೆಯನ್ನು ಹಂಚಿಕೊಂಡವು.

ಗಣಿ ಉದ್ಯಮದಲ್ಲಿಯೂ ಸಹ ಎತ್ತುವ, ಇಳಿಸುವ ಕೆಲಸಗಳನ್ನು ಮಹಿಳಾ ಕಾರ್ಮಿಕರು ಮಾಡುತ್ತಿದ್ದು, ಈ ಕೆಲಸಗಳು ಯಾಂತ್ರಿಕೀಕರಣಕ್ಕೆ ಒಳಗಾಗುತ್ತಲೇ ಮಹಿಳೆಯರ ಕೆಲಸದ ಅವಕಾಶಗಳನ್ನು ಕುಂಠಿತಗೊಳಿಸಿತು.

೧೯೭೦ರಿಂದೀಚೆಗೆ ಕೇರಳದಲ್ಲಿ ಕತ್ತರಿಸುವ, ಅಳಿಯುವ, ಕುಟ್ಟುವ ಯಂತ್ರಗಳು ಹಗ್ಗದ ಕೈಗಾರಿಕೆಯಲ್ಲಿ ಮಹಿಳಾ ಕಾರ್ಮಿಕರ ಕೆಲಸಕ್ಕೆ ಪೆಟ್ಟುಕೊಟ್ಟಿವೆ.

ಆಧುನಿಕ ಕೈಗಾರಿಕೆಗಳಾದ ಫಾರ್ಮಾಸ್ಯುಟಿಕಲ್ಸ್‌ನಲ್ಲಿ ಪ್ಯಾಕಿಂಗ್ ಹಾಗೂ ಇಂಜೆಕ್ಟಬಲ್ ಸೆಕ್ಷನ್‌ಗಳಲ್ಲಿ ನಡೆದ ಯಾಂತ್ರಿಕೀಕರಣ ಬಹು ಪಾಲು ಅಶಕ್ತರಾಗಿದ್ದ ಮಹಿಳಾ ಕಾರ್ಮಿಕರನ್ನು ನಿರುದ್ಯೋಗಿಗನ್ನಾಗಿಸಿತು.

**ರಕ್ಷಣಾ ಕಾಯಿದೆಗಳು :** ರಕ್ಷಣಾ ಕಾಯಿದೆಗಳು ಮಹಿಳಾ ಕಾರ್ಮಿಕರಿಗೋಸ್ಕರವಾಗಿ ಇದ್ದರೂ ಇವೂ ಸಹ ಮಹಿಳೆಯರ ಕೆಲಸದ ಹಕ್ಕಿನ ಮೇಲೆ ಋಣಾತ್ಮಕವಾದ ಪರಿಣಾಮವನ್ನು ಬೀರಿವೆ. ಟೆಕ್ಸ್‌ಟೈಲ್ ಕೈಗಾರಿಕೆಗೆ ಸಂಬಂಧಿಸಿದಂತೆ ೧೯೪೮ರಲ್ಲಿ ಪಾಸಾದ ಮಸೂದೆಗೆ ಮಹಿಳಾ ಕಾರ್ಮಿಕರ ಕೆಲಸದ ರೂಪ ರೇಖೆಗಳನ್ನು ನಿರ್ಧಿಷ್ಟಗೊಳಿಸಿತು. ಈ ಕಾರಣದಿಂದಲೂ ೬೦ರ ದಶಕದ ಮಧ್ಯಂತರದಲ್ಲಿ ಮಹಿಳಾ ಕಾರ್ಮಿಕರ ಸಂಖ್ಯೆ ಇಳಿಮುಖವಾಯಿತು. ಯಾಂತ್ರಿಕೀರಕಣ ಹೆಚ್ಚು ಖರ್ಚಿನದಾದಾಗ, ಅಧಿಕಾರಶಾಹಿವರ್ಗ ರಾತ್ರಿಪಾಳಿ ಹಾಗೂ ಇತರೇ ಕೆಲಸದ ಅವಧಿಯನ್ನು ಹೆಚ್ಚಿಸುವುದರ ಮೂಲಕ ಉತ್ಪಾದನೆಯನ್ನು ದ್ವಿಗುಣಗೊಳಿಸಿಕೊಳ್ಳುತ್ತದೆ. ಈ ಹಂತ ಮಹಿಳಾ ಕಾರ್ಮಿಕರ ಮೇಲೆ ದುಷ್ಪರಿಣಾಮ ಬೀರುತ್ತದೆ. ಏಕೆಂದರೆ ಕಾರ್ಖಾನೆಯ ಕಾಯಿದೆಯ ಪ್ರಕಾರ ಮಹಿಳಾ ಕಾರ್ಮಿಕರು ರಾತ್ರಿ ಪಾಳಿಯ ಕೆಲಸದಿಂದ ರಿಯಾಯಿತಿ ಪಡೆದವರು. ಜೊತೆಗೆ ತಾಯ್ತನದ ಸವಲತ್ತುಗಳನ್ನು ಒದಗಿಸಬೇಕೆಂಬ ಕಾರಣದಿಂದ ಅಧಿಕಾರಶಾಹಿ ವರ್ಗ ಬೇರೆಯ ಉಪಾಯಗಳನ್ನು ಹುಡುಕಿಕೊಳ್ಳುತ್ತಾರೆ. ಉದಾಃಹರಣೆಗೆ, ಕಲ್ಕತ್ತದ ಕೇಸೋರಾಂನ ಟೆಕ್ಸ್‌ಟೈಲ್‌ನಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರು ಬಹಿಷ್ಠೆಯಾಗದಿರುವ ಹಂತ ತಲುಪಿದವರು ಅಥವಾ ಮದುವೆಯಾಗದಿರುವ ಹುಡುಗಿಯರು ಇವರು

ತಾತ್ಕಾಲಿಕವಾಗಿ ನೇಮಕಗೊಂಡು ಮದುವೆಯ ನಂತರದಲ್ಲಿ ನಾನಾ ಕಾರಣಗಳ ನೆವದಲ್ಲಿ ಕೆಲಸದಿಂದ ವಜಾ ಆಗಲ್ಪಡುತ್ತಾರೆ.

ಗಣಿ ಉದ್ಯಮದಲ್ಲಿ ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಮಹಿಳೆಯರು ಗಣಿ ಒಳಗಿನ ಹಾಗೂ ಹೊರಗಿನ ಎರಡೂ ಕೆಲಸ ನಿರ್ವಹಿಸುತ್ತಿದ್ದರು. ೧೯೧೯ರಲ್ಲಿ ಶೇ. ೩೮ ಶ್ರಮಶಕ್ತಿಯಲ್ಲಿ ಇವರ ಪಾಲುಗಾರಿಕೆಯಾಗಿತ್ತು. ೧೯೩೯ರ ಮಸೂದೆ ಹೆಂಗಸರು ಗಣಿ ಒಳಗೆ ಕೆಲಸ ಮಾಡುವುದನ್ನು ನಿರ್ಬಂಧಿಸಿತು. ಈ ರಕ್ಷಣಾ ಕಾಯಿದೆಯಿಂದಾಗಿ ೧೯೫೧ರಲ್ಲಿ ಶೇ. ೧೯ ಮಾತ್ರ ಮಹಿಳಾ ಕಾರ್ಮಿಕರಿದ್ದರು. ೧೯೬೧ರಲ್ಲಿ ಶೇ. ೯.೩ ಹಾಗೂ ೧೯೭೦ರಲ್ಲಿ ಶೇ. ೫.೫ ಮಾತ್ರ. ೧೯೬೬ರ ಮೈನ್ಸ್ ಆ್ಯಕ್ಟ್ ಮಹಿಳಾ ಕಾರ್ಮಿಕರು ಸಂಜೆ ೭ ಹಾಗೂ ಬೆಳಿಗ್ಗೆ ೬ ಘಂಟೆಯ ಮಧ್ಯಂತರದಲ್ಲಿ ಕೆಲಸ ಮಾಡುವುದನ್ನು ನಿರ್ಭಂಧಿಸಿತು.

ಮಹಿಳಾ ಕಾರ್ಮಿಕರ ಆರೋಗ್ಯಕ್ಕೆ ಹಾಗೂ ಇತರ ವಿಚಾರಗಳಿಗೆ ಸಂಬಂಧಿಸಿದ ಈ ಸವಲತ್ತುಗಳು ಅವರ ಕೆಲಸದ ಅವಕಾಶಗಳಿಗೇ ಮಾರಕವಾಗಿ ಪರಿಣಮಿಸುತ್ತವೆ (ಮಿತ್ರ ಮಾನೋಪಿ ೧೯೮೪).

ಆಧುನಿಕ ಕೈಗಾರಿಕೆಗಳಾದ ಫಾರ್ಮಾಸ್ಯುಟಿಕಲ್ಸ್‌ನಲ್ಲಿ ಸಹ ಈ ರೀತಿಯ ವೈರುಧ್ಯಗಳು ಕಂಡುಬಂದಿವೆ. ಉದಾ; ಬಂಬೆಯಲ್ಲಿ ಪಾರ್ಲೆಯೊಂದನ್ನು ಬಿಟ್ಟರೆ ಇನ್ನುಳಿದ ಎಲ್ಲಾ ಫಾರ್ಮಾಸ್ಯುಟಿಕಲ್ಸ್ ಕಂಪನಿಗಳಲ್ಲೂ ಮಹಿಳಾ ಕಾರ್ಮಿಕರು ಮೊದಲ ಪಾಳಿಯಲ್ಲಿ ಕೆಲಸ ಮಾಡುತ್ತಾರೆ. ಮಹಿಳಾ ಕಾರ್ಮಿಕರ ಸಂಖ್ಯೆ ಇಳಿಮುಖವಾಗುತ್ತಿರುವುದಕ್ಕೆ ಶಿಫ್ಟ್ ಪದ್ಧತಿಯೇ ಕಾರಣವೆಂದು ಅಧಿಕಾರ ವರ್ಗದ ಅಭಿಪ್ರಾಯ:

"ಹೊಸ ಯಂತ್ರಗಳನ್ನು ಶಿಫ್ಟ್ ಪದ್ಧತಿಯಲ್ಲಿ ಬಳಸಬೇಕಾಗುತ್ತದೆ. ಮಹಿಳೆಯರು ಶಿಫ್ಟ್‌ನಲ್ಲಿ ಕೆಲಸ ಮಾಡಲಾರರು,

ಕುಟುಂಬದಲ್ಲಿ ಯಾರಿಗೋ ಕಾಯಿಲೆಯಾದಾಗ ಮಹಿಳೆಯರು ಗೈರು ಹಾಜರಾಗುತ್ತಾರೆ. ಅವರಿಗೆ ತಾಯ್ತನದ ಹಾಗೂ ಶಿಶು ಕೇಂದ್ರ ಒದಗಿಸಬೇಕಾಗುತ್ತದೆ. (ಸುಜಾತ ಎಸ್. ವಿ., ರೋಹಿಣಿ ಬನಾಜಿ, ೧೯೮೪, ಪೇ, ೩೯)"

ರಾತ್ರಿ ಪಾಳಿಗೆ, ಭೂಮಿಯ ಕೆಳಗೆ ಕೆಲಸ ಮಾಡುವುದಕ್ಕೆ, ಹೆಚ್ಚು ಭಾರ ಹೊರುವುದಕ್ಕೆ ಕುರಿತಾದ ರಕ್ಷಣಾ ಕಾಯಿದೆಗಳು ಅಗತ್ಯವೋ, ಇಲ್ಲವೋ ಎನ್ನುವುದು ವಿವಾದಾತ್ಮಕ ವಿಚಾರ. ಆದರೆ ಈ ಕಾಯಿದೆಯು ಮಹಿಳೆಯರ ಕೆಲಸದ ಅವಕಾಶಗಳ ವಿರುದ್ಧ ಕೆಲಸ ಮಾಡುತ್ತಿವೆ. ಶ್ರಮಶಕ್ತಿಯಲ್ಲಿ ಅವರ ಪಾಲುಗೊಳ್ಳುವಿಕೆ ಗೌಣವಾಗುವಂತೆ ಮಾಡುತ್ತಿದೆ ಎನ್ನುವುದು ಸತ್ಯ ಸಂಗತಿ. ಈ ರಕ್ಷಣಾ ಕಾಯಿದೆಗಳು ಪಿತೃ ಪ್ರಧಾನ ಮೌಲ್ಯಗಳಿಂದ ಉದ್ಭವಿಸಿದವೋ ಅಥವಾ ಮಹಿಳೆಯರು ಕುಟುಂಬದ ಕಾರ್ಯ ನಿರ್ವಹಿಸಲು ಅನುಕೂಲವಾಗಲಿ ಎಂಬ ಕಾರಣದಿಂದ ಉದ್ಭವಿಸಿದವೋ ? ಹೇಗಾದರೂ ಶ್ರಮಶಕ್ತಿಯಲ್ಲಿ ಭಾಗವಹಿಸುವ ಮಹಿಳಾ ಕಾರ್ಮಿಕರಿಗೆ ಮಾತ್ರ ಇವು ಋಣಾತ್ಮಕ ಪರಿಣಾಮವನ್ನೇ ಉಂಟುಮಾಡುತ್ತಿವೆ. ಈ ರಕ್ಷಣಾ ಕಾಯಿದೆಗಳು ಪುರುಷರಿಗೆ, ಮಹಿಳೆಯರಿಗೆ ಏಕಕ್ರಮವಾಗಿ ಅನ್ವಯವಾಗಬೇಕು. ಇದು ಸಾಮಾಜಿಕ ರಚನೆಯ ಮೂಲಭೂತ ಬದಲಾವಣೆಯನ್ನೇ ಅಪೇಕ್ಷಿಸುತ್ತದೆ. ರಾತ್ರಿಪಾಳಿ ಕೆಲಸ ಮಾಡಲೇ ಬೇಕಾದ ಕಾರ್ಮಿಕಳು ತನ್ನ ಮನೆಗೆಲದಿಂದ ಬಿಡುಗಡೆ ಹೊಂದಬೇಕಾಗುತ್ತದೆ, ಅಥವಾ ರಾತ್ರಿಪಾಳಿ ಆರೋಗ್ಯಕ್ಕೆ ಹಾನಿಕಾರಿಯಾದರೆ ಇದರ ರದ್ದತಿಗೆ ಒಟ್ಟಾಗಿ ಕಾರ್ಮಿಕ ಸಂಘಟನೆಗಳು ಹೋರಾಡಬೇಕಾಗುತ್ತದೆ. ಇದಕ್ಕಿಂತ ಮುಖ್ಯ ಅಂಶವೆಂದರೆ ರಕ್ಷಣಾ ಕಾಯಿದೆಗಳಿರಲಿ ಇಲ್ಲದಿರಲಿ ಹೇಗೆ ಶ್ರಮಶಕ್ತಿಯಲ್ಲಿ ಇವರ ಪಾಲುಗೊಳ್ಳುವಿಕೆ ಸಮತೋಲನ ಕಾಯ್ದುಕೊಳ್ಳುತ್ತದೆ ಎಂಬುದು ಮುಖ್ಯ ರಾತ್ರಿ ಕೆಲಸ ಮಾಡುವುದರ ಜೊತೆಗೆ, ಲೈಂಗಿಕ ಅತ್ಯಾಚಾರದ ಭಯದಿಂದ ಓಡುವುದನ್ನಾಗಲಿ ಅಥವಾ ಮನೆಗೆಲಸ, ಕಾರ್ಖಾನೆಯ ಕೆಲಸಗಳ ಹೊರೆಯನ್ನು ಹೊರುವುದನ್ನು ಮಹಿಳಾ ಕಾರ್ಮಿಕರಿಂದ ನಿರೀಕ್ಷಿಸುವುದು ಸಾಧ್ಯವಿಲ್ಲದ ಮಾತು. ಈ ಹಂತದಲ್ಲೂ ಸಹ ಬಂಡವಾಳಶಾಹಿತ್ವ ಹಾಗೂ ಪಿತೃಪ್ರಧಾನ ಮೌಲ್ಯಗಳು ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುತ್ತವೆ ಎಂಬುದನ್ನು ಗಮನಿಸಬಹುದು. ಬಂಡವಾಳಶಾಹಿಗಳು ಒಂದು ಕಡೆ ಅಗ್ಗದ ಶ್ರಮ ಶಕ್ತಿಯಾಗಿ ಮಹಿಳಾ ಕಾರ್ಮಿಕರನ್ನು ಸೆಳೆದುಕೊಂಡರೆ, ಮತ್ತೊಂದು ಕಡೆ ಅದರ ಪಿತೃಪ್ರಧಾನ ಮೌಲ್ಯಗಳಿಂದಾಗಿ ಅವರ ಶ್ರಮ ಶಕ್ತಿಯ ಮೇಲೆ ಕೆಲವೊಂದು ಮಿತಿಗಳನ್ನು ಹೇರುತ್ತದೆ. ಕಾರ್ಮಿಕ ಸಂಘಟನೆಗಳು ಸೂಕ್ಷ್ಮವಾಗಿ ಈ ರೀತಿಯ ಸಮಸ್ಯೆಗಳಿಗೆ

ಸ್ಪಂದಿಸಬೇಕಾಗುತ್ತದೆ.

---

ಹೀಗೆ ಅನೇಕ ಕಾರ್ಖಾನೆಗಳಲ್ಲಿ ಯಾಂತ್ರೀಕರಣದಿಂದಾಗಿ ಮಹಿಳಾ ಕಾರ್ಮಿಕರು ಕೆಲಸದ ಹಕ್ಕು ಕಳೆದುಕೊಳ್ಳುತ್ತಿದ್ದಾರೆ. ಇದಕ್ಕೆ ತಾಂತ್ರಿಕತೆಯೇ ಕಾರಣ ಎಂದಲ್ಲ, ಆದರೆ ತಾಂತ್ರಿಕತೆಯನ್ನು ಬಳಸಿಕೊಳ್ಳುವ ಬಗೆ ಹಾಗೂ ಪ್ರತಿಪಾದಿಸಲ್ಪಡುವ ವಿಚಾರಧಾರೆಗಳು. ಬಂಡವಾಳಶಾಹಿತ್ವ - ಪಿತೃಪ್ರಧಾನ ಮೌಲ್ಯಗಳನ್ನು ಬಳಸಿಕೊಂಡು ಮಹಿಳಾ ಕಾರ್ಮಿಕರನ್ನು ಬಲಿಪಶುಗನ್ನಾಗಿಸುತ್ತದೆ ಬಂಡವಾಳಶಾಹಿ ಹಾಗೂ ಪಿತೃಪ್ರಧಾನ ಮೌಲ್ಯಗಳು ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುತ್ತದೆ.

---

**ಅಸಮಾನ ವೇತನ :** ೧೯೭೬ರಲ್ಲಿ ಸಮಾನ ವೇತನ ಕಾಯ್ದೆ ಜಾರಿಗೆ ಬಂದಿದ್ದರೂ ಹೆಚ್ಚು ಕೈಗಾರಿಕೆಗಳಲ್ಲಿ ಮಹಿಳಾ ಕಾರ್ಮಿಕರು ಪುರುಷರಿಗಿಂತ ಕಡಿಮೆ ವೇತನ ಪಡೆಯುತ್ತಾರೆ. ಈ ಕಾರಣಕ್ಕೋಸ್ಕರವೇ ಬಾಯಿಮಾತಿನ ನೇಮಕಾತಿಗಳು ಹೆಚ್ಚು ನಡೆ ನಡೆಯುತ್ತವೆ. ಹಾಗಾಗಿ ಕಾನೂನಿನ ಮೂಲಕ ದೊರೆಯುವ ಸೌಲಭ್ಯಗಳು ಈ ಮಹಿಳಾ ಕಾರ್ಮಿಕರಿಗೆ ದಕ್ಕದೇ ಹೋಗಬಹುದು. ಈ ಮಹಿಳಾ ಕಾರ್ಮಿಕರು ಅಧಿಕಾರಶಾಹಿ ವರ್ಗದ ಬೇಕು ಬೇಡಗಳಿಗೆ ತಾಳ ಹಾಕಬೇಕಾಗುತ್ತದೆ, ಉದಾಹರಣೆಗೆ ಕಲ್ಕತ್ತಾದ ಮೂರು ಖಾಸಗಿ ಹತ್ತಿ ಮಿಲ್ಲುಗಳಲ್ಲಾಗಲೀ, ಒಂದು ರಾಷ್ಟ್ರೀಕೃತ ಟೆಕ್ಸ್‌ಟೈಲ್‌ನಲ್ಲಾಗಲೀ, ಅಥವಾ ರಾಜ್ಯಸರ್ಕಾರದ ಒಡೆತನವಿರುವ ಮಿಲ್ಲಿನಲ್ಲಾಗಲೀ - ೧೯೬೫ರವರೆಗೆ ನೇರವಾಗಿ ನೇಮಕಾತಿ ನಿಯಮಗಳಿಗನುಸಾರವಾಗಿ ನೇಮಕಗೊಂಡ ಮಹಿಳಾ ಕಾರ್ಮಿಕರಿಲ್ಲ. ಹೀಗೆ ಅಧಿಕೃತವಲ್ಲದ ನೇಮಕಾತಿಗಳಿಂದ ಕಾನೂನನ್ನು ಆಲಕ್ಷಿಸುವುದು ಅಧಿಕಾರಶಾಹಿ ವರ್ಗಕ್ಕೆ ಸುಲಭ. ಜೊತೆಗೆ ಇಂದು ಟೆಕ್ಸ್‌ಟೈಲ್‌ನ ಹೆಚ್ಚು ಮಂದಿ ಕಾರ್ಮಿಕರು ಒಪ್ಪಂದದ ಮೇರೆಗೆ ಇರುವವರು ಅಥವಾ ದಿನಗೂಲಿಗಳು ಫಾರ್ಮಾಸುಟಿಕಲ್ಸ್‌ನಲ್ಲಿ ಹೆಚ್ಚು ಸಂಬಳ ಸಿಗುವ ಮೆಷಿನ್ ಆಪರೇಟರ್ಸ್ ಕೆಲಸಗಳು ಪುರುಷರಿಗೆ ಸೀಮಿತ ಹಗ್ಗ ಮತ್ತು ಬೀಡಿ ಕಾರ್ಖಾನೆಗಳಲ್ಲಿ ಸಮಾನ ಕೆಲಸಗಳಿಗೆ ಮಹಿಳೆಯರಿಗೆ ಕಡಿಮೆ ವೇತನ ದೊರೆಯುತ್ತದೆ. ಈ ರೀತಿಯ ಅಸಮಾನ ವೇತನಕ್ಕೆ ಕಾರಣವಾಗುವ ವಿಚಾರಧಾರೆಯೆಂದರೆ ಮಹಿಳೆಯರು "ಪೂರಕ ಗಳಿಕೆದಾರರು" ಎಂದು ವ್ಯಾಖ್ಯಾನಿಸಲ್ಪಟ್ಟಿರುವುದು, ಮಹಿಳಾ ಕಾರ್ಮಿಕರ ಆದಾಯ ಮುಖ್ಯ ಆದಾಯವಲ್ಲ, ಕುಟುಂಬದಲ್ಲಿ ಪುರುಷರ ಆದಾಯಕ್ಕೆ ಪೂರಕ ಮಾತ್ರ ಎಂಬ ಕಲ್ಪನೆ.

**ಲಿಂಗಾಧಾರಿತ ಶ್ರಮ ವಿಭಜನೆ:**

ಕಾರ್ಖಾನೆಗಳಲ್ಲಿ ಮಹಿಳಾ ಕಾರ್ಮಿಕರು ಎಲ್ಲಾ ಕೆಲಸಗಳನ್ನೂ ಮಾಡುವಂತಿಲ್ಲ ಮಹಿಳೆಯರ ಕೆಲಸ ಎಂಬ ವಿಚಾರಧಾರೆಯ ಮೇಲೆ ಇಲ್ಲಿಯೂ ಲಿಂಗಾಧಾರಿತ ಶ್ರಮ ವಿಭಜನೆ ಇರುವುದನ್ನು ಕಾಣಬಹುದು. ಟೆಕ್ಸ್‌ಟೈಲ್‌ನಲ್ಲಿ ಮಹಿಳಾ ಕಾರ್ಮಿಕರು ಸುತ್ತುವ, ಆರಿಸುವ ಹಾಗೂ ಮಡಚುವ ಕೆಲಸಗಳಲ್ಲೇ ಕೇಂದ್ರೀಕೃತರಾಗಿದ್ದಾರೆ. ಕೊಯಮತ್ತೂರಿನ ಮಿಲ್ಲಿನಲ್ಲಿ ಇರುವ ೧೯ ಕೆಲಸಗಳಲ್ಲಿ ಮಹಿಳಾ ಕಾರ್ಮಿಕರು ೨ ಕೆಲಸಗಳನ್ನು ಮಾತ್ರ ಮಾಡುತ್ತಾರೆ. ಬಾಂಬೆ, ಕಾನ್ಪುರ ಆಹಮದಾಬಾದ್, ಕೊಯಮತ್ತೂರ್ ಯಾವ ಕಡೆಗಳಲ್ಲೂ ಮಹಿಳಾ ಕಾರ್ಮಿಕರು ನೇಯ್ಗೆಗಾರರಾಗಿರುವುದು ಕಂಡು ಬಂದಿಲ್ಲ. ಮಹಿಳಾ ಕಾರ್ಮಿಕರು ಕೇಂದ್ರೀಕೃತರಾಗಿರುವ ಕೆಲಸಗಳು ಕಡಿಮೆ ದರ್ಜೆಯ ಕುಶಲತೆ ಹೊಂದಿರುವುದಲ್ಲದೇ, ಕಡಿಮೆ ಸಂಬಳ ತರುವಂತವುಗಳು ಮಹಿಳಾ ಕಾರ್ಮಿಕರಿಗೆ ತಕ್ಕ ಕೆಲಸಗಳು ಎಂದು ನಿರ್ಧರಿಸಲಾಗಿದೆ. "ಮಹಿಳೆಯರ ಕೋಮಲ ಬೆರಳುಗಳು" ಈ ಕೆಲಸಕ್ಕೆ ತಕ್ಕವು ಎಂಬುದು ಇವರ ವಾದ. ನೇಯುವ, ಒಣಗಿಸುವ, ಹೊಲಿಯುವ, ಡೈಯಿಂಗ್ ಮಾಡುವ ಕೆಲಸಗಳೆಲ್ಲಾ ಪುರುಷ ಕಾರ್ಮಿಕರಿಗೇ ಮೀಸಲು.

ಗಾರ್ಮೆಂಟ್ಸ್‌ನಲ್ಲಿಯೂ ಸಹ ಮಹಿಳಾ ಕಾರ್ಮಿಕರು ದಾರ ಕತ್ತರಿಸುವ, ಕೈ ಕಸೂತಿ ಹಾಕುವ, ಗುಂಡಿ ಹಚ್ಚುವ ಕೆಲಸಗಳನ್ನು ಮಾತ್ರ ಮಾಡುತ್ತಾರೆ, "ಕೋಮಲ ಬೆರಳುಗಳು, ಸೂಕ್ಷ್ಮ ಕಣ್ಣುಗಳು, ಅಗಾಧ ತಾಳ್ಮೆ" ಇಂತಹ ಹೆಣ್ತನಗಳನ್ನು ಅರಸುವ ಕೆಲಸಗಳನ್ನೇ ಇವರಿಗೆ ಕೊಡಲಾಗುತ್ತದೆ. ಇಲ್ಲಿಯೂ ಸಹ ಹೀಗೆ ಬಂಡವಾಳಶಾಹಿತ್ವ ಹಾಗೂ ಪಿತೃಪ್ರಧಾನ ಮೌಲ್ಯಗಳು ಮಹಿಳಾ ಕಾರ್ಮಿಕರಿಗೆ ವಿಷವೃತ್ತ ಸೃಷ್ಟಿಸುತ್ತವೆಯೆಂಬುದನ್ನು ಗಮನಿಸಬಹುದು. ಮಹಿಳಾ ಕಾರ್ಮಿಕರು ಕೌಟುಂಬಿಕ ವಿಚಾರಧಾರೆಯನ್ನೇ ಕೆಲಸದಲ್ಲೂ, ಕುಟುಂಬದಲ್ಲೂ ಏಕಕಾಲಕ್ಕೆ ಹಂಚಿಕೊಬೇಕು,

**ಕಾರ್ಮಿಕ ಸಂಘಟನೆಯ ನಿಲುವುಗಳು :**

ಕೆಲವು ಕಾರ್ಖಾನೆಗಳ ಅಧ್ಯಯನಗಳು, ವರದಿಗಳ ಪ್ರಕಾರ ಮಹಿಳಾ ಕಾರ್ಮಿಕರು ತಮ್ಮ ಕಾರ್ಮಿಕ ಸಂಘಟನೆಗಳಿಗೆ ಅಧಿಕೃತ ಸದಸ್ಯರಾಗಿರುತ್ತಾರೆ, ಮಾಸಿಕ ಚಂದಾಹಣ ಕೊಡುವ ಇವರು ಸಂಘಟನೆಯಲ್ಲಿ ಕ್ರಿಯಾಶೀಲರಾಗಿ ಕೆಲಸ ಮಾಡುವುದಿಲ. ಹೀಗೆ ಕ್ರಿಯಾಶೀಲರಾಗಿ ಕೆಲಸ ಮಾಡಲು ಅಥವಾ ಹೋರಾಡಲು ಮನೆಗೆಲಸಗಳು ಇವರಿಗೆ ದೊಡ್ಡ ಅಡ್ಡಿಯಾಗಿವೆ. ಜೊತೆಗೆ ಸಂಘಟನೆಗಳು ಪುರುಷರ ಕೆಲಸಗಳು ಎಂಬುದು ಸಂಘಟನೆಯ ಬಗೆಗಿನ ಇವರ ನಿಲುವುಗಳು. ಜೊತೆಗೆ ಕಾರ್ಮಿಕ ಸಂಘಟನೆಗಳು ಮಹಿಳಾ ಕಾರ್ಮಿಕರ ನಿರ್ದಿಷ್ಟ ಸಮಸ್ಯೆಗಳನ್ನು ಗಮನಿಸುವುದಿ.ಲ್ಲ ಮಹಿಳಾ ಕಾರ್ಮಿಕರು ನೇಮಕಾತಿಗೊಳ್ಳದಿರುವುದು, ತಾಯ್ತನ, ಶಿಶುಕೇಂದ್ರದ ಸೌಲಭ್ಯಗಳು ಕಾರ್ಮಿಕ ಸಂಘಗಳ ಸಮಸ್ಯೆಗಳು ಆಗಿರುವುದೇ ಇಲ್ಲ. ಟೆಕ್ಸ್‌ಟೈಲ್‌ನಲ್ಲಿ ತಾತ್ಕಾಲಿಕ ಸ್ತ್ರೀ ಕಾರ್ಮಿಕರು ತಮ್ಮ ಕೆಲಸದ ಸ್ಥಿರತೆಗೋಸ್ಕರ ಅಧಿಕಾರ ವರ್ಗದವರಿಗೆ ತಮ್ಮನ್ನು ಮಾರಿಕೊಳ್ಳಬೇಕಾಗುತ್ತದೆ. ಈ ರೀತಿಯ ಲೈಂಗಿಕ ಶೋಷಣೆಗಳು ಕಾರ್ಮಿಕ ಸಂಘಗಳ ಹೋರಾಟದ ಮುಖ್ಯ ಅಂಶಗಳಲ್ಲ. ಬದಲಾಗಿ ಹೆಚ್ಚು ಕಾರ್ಯಶೀಲರಾಗುವ ಹೆಚ್ಚು ಆಸಕ್ತಿಯಿಂದ ಮುಂದುವರೆಯುವ ಸ್ತ್ರೀ ಕಾರ್ಮಿಕರ ಚಟುವಟಿಕೆ ಮುರಿಯಲು ಅವರ ನಡತೆಯ ಬಗ್ಗೆ ಸಾಕಷ್ಟು ಗುಮಾನಿ ಹುಟ್ಟಿಸಿ, ನಾಯಕತ್ವ ಮುರಿಯಲು ಪ್ರಯತ್ನಿಸಲಾಗುತ್ತದೆ. ಸಂಘಟನೆಗಳು ಪುರುಷರ ನಾಯಕತ್ವಕ್ಕೆ ಸ್ತ್ರೀ ಕಾರ್ಮಿಕರ ನಿಷ್ಕ್ರಿಯ ಬೆಂಬಲವನ್ನು ನಿರೀಕ್ಷಿಸುತ್ತವೆ (ರೋಹಿನಿ, ಎ. ಎಚ್. ಸುಜಾತ, ನೀಲಂ ಸಿ. ೧೯೮೧).

ಫಾರ್ಮಸುಟಿಕಲ್ಸ್‌ನಲ್ಲಿ ಕಾರ್ಮಿಕ ಸಂಘಟನೆಯು ತಾಯ್ತನ ಹಾಗೂ ಶಿಶುಕೇಂದ್ರಗಳ ಬಗ್ಗೆ ಹೋ

---

**ಚಂಪಾವತಿ ಎಚ್. ಎಸ್.**

---

ರಾಡಿದ್ದರೂ ಸಹ, ನೇಮಕಾತಿಯಲ್ಲಿನ ಕೆಲಸದಲ್ಲಿನ ತಾರತಮ್ಯಗಳಿಗಾಗಲೀ ಹೋರಾಡಿಲ್ಲ. 'ಪ್ಯಾಕಿಂಗ್ ವಿಭಾಗದ ಸ್ತ್ರೀ ಕಾರ್ಮಿಕರಿಗೆ ಕೆಲಸದ ಹೊರೆ ಹೆಚ್ಚಾಗಿರುವ ಬಗ್ಗೆ ಇವರಿಗೆ ಕಾಳಜಿಯಿಲ್ಲ, ಆದರೆ ಸಂಬಳಕ್ಕಾಗಿ ಹೋರಾಡುವುದೇ ಮುಖ್ಯ ಆಸಕ್ತಿ. ಹೊಸ ತಾಂತ್ರಿಕತೆ ಪರಿಚಯಿಸಿದಾಗಾಗಲೀ, ಉತ್ಪಾದನೆಯ ಮಟ್ಟ ನಿರ್ಧರಿಸುವುದಾಗಲೀ, ಕೆಲಸವನ್ನು ಹಂಚುವುದಾಗಲೀ ಇವರ ವ್ಯಾಪಾರಗಳಲ್ಲವೆಂದೇ ತೀರ್ಮಾನಿಸಲಾಗಿದೆ.

ಕೇರಳದ ಹಗ್ಗದ ಕಾರ್ಖಾನೆಯ ಇತಿಹಾಸದಲ್ಲಿ ನಾವು ಕಾರ್ಮಿಕ ಸಂಘಟನೆಗಳು ಹಾಗೂ ಸ್ತ್ರೀಸಂಘಟನೆಗಳ ಮಧ್ಯದ ಸಂಬಂಧ ಕಾಣಬಹುದು.

---

ಪ್ರಿಯ ಓದುಗರಲ್ಲಿ,

ನೀವು ಮಾನಸ ತಿಂಗಳಪತ್ರಿಕೆಯ ಮುಖಪುಟ ಹಾಗೂ ಒಳಗಿನ ಪುಟಗಳ ಗ್ರ್ಯಾಫಿಕ್ಸ್ ಗಮನಿಸಿರಬಹುದು. ಪ್ರತಿ ಸಂಚಿಕೆಯಲ್ಲೂ ಹೀಗೆ ಪ್ರತಿ ಲೇಖನಕ್ಕೆ ಹಾಗೂ ಅಂಕಣಗಳಿಗೆ ಸಂಬಂಧಿಸಿದಂತೆ ಚಿತ್ರಗಳನ್ನು ಪ್ರಕಟಿಸಲಾಗುವುದು. ನೀವು ಕಲಾವಿದರಾಗಿದ್ದರೆ ನಿಮ್ಮ ಚಿತ್ರಗಳನ್ನು 'ಮಾನಸ, ಪ್ರಕಟಣೆಗೆ ಕಳುಹಿಸಿ ಕೊಡಿ.

---

೩೦ರ ದಶಕದಲ್ಲಿ ಅಲ್ಲಿ ಕಾರ್ಮಿಕ ಸಂಘಟನೆಗಳ ಭಾಗಗಳಾಗಿ ಮಹಿಳಾ ಕಾರ್ಮಿಕರ ಕಮಿಟಿಗಳು ದುಡಿಯುವ ಸಂಸ್ಥೆಗಳಾಗಿದ್ದವು. ದುಡಿಯುವ ಮಹಿಳೆಯರ ಹೋರಾಟ ನಡೆಸಲು ಪ್ರಯತ್ನಿಸುತ್ತಿದ್ದ ಹಗ್ಗದ ಕಾರ್ಖಾನೆಯ ಕಾರ್ಮಿಕಳಾಗಿದ್ದ ಮೀನಾಕ್ಷಿ ಈ ಸಂಘಟನೆಯ ನಾಯಕಿಯಾಗಿ ರೂಪುಗೊಂಡು ತಾಯ್ತನದ ಸವಲತ್ತುಗಳು, ಶಿಶುಕೇಂದ್ರಗಳು, ಸ್ತ್ರೀ ಕಾರ್ಮಿಕರ ವಜಾ ಇಂತಹ ಬೇಡಿಕೆಗಳ ಸುತ್ತ ಸ್ತ್ರೀಯರನ್ನು ಸಂಘಟಿಸತೊಡಗಿದರು. ಮೊದಲು ದರಾಗ್ ಸ್ಮೇಲ್ ಕಂಪನಿಯಲ್ಲಿ ತಾಯ್ತನದ ಸವಲತ್ತುಗಳ ಹೋರಾಟ ನಡೆಸಿ ಗೆಲ್ಲಲಾಯಿತು. ೧೯೪೪—೪೫ರಲ್ಲಿ ೨೮೮ ಮಹಿಳಾ ಕಾರ್ಮಿಕರು ತಾಯ್ತನದ ಸವಲತ್ತು ಪಡೆದುಕೊಂಡರು. ಗುಡ್ ಕ್ರೆ ಕಂಪನಿಯಲ್ಲಿ ಮಧ್ಯವರ್ತಿಗಳು ಬೈಯಲು ಬಳಸುವ ಕೆಟ್ಟ ಭಾಷೆಯನ್ನು ವಿರೋಧಿಸಲು ಮಹಿಳಾ ಕಾರ್ಮಿಕರು ಹೊಸದಾದ ರೀತಿಯಲ್ಲಿ ಸಂಘಟಿತರಾದರು. ತಮ್ಮ ಅಡಿಕೆಯ ಡಬ್ಬಗಳಲ್ಲಿ ಸಣ್ಣ ಸಣ್ಣ ಕಲ್ಲುಗಳನ್ನು ತುಂಬಿಕೊಂಡು, ಮಧ್ಯವರ್ತಿಗಳು ಸ್ತ್ರೀಯರಿಗೆ ಅನಾವಶ್ಯಕವಾಗಿ ಕೆಟ್ಟ ಭಾಷೆಯಲ್ಲಿ ಬೈದಾಗ ಆ ಕಲ್ಲನ್ನು ಎಸೆಯುತ್ತಿದ್ದರು. ಹೀಗೆ, ಬೈಯುವುದನ್ನು ಕಡಿಮೆ ಮಾಡಿಸಲಾಯಿತು.

೧೯೪೦ರಲ್ಲಿ ಕಾರ್ಖಾನೆಯ ಮಹಿಳಾ ಕಮಿಟಿಯಲ್ಲಿ ಕ್ರಿಯಾಶೀಲರಾದ ಸ್ತ್ರೀ ಕಾರ್ಮಿಕರು ತಾಯ್ತನದ ಸವಲತ್ತುಗಳು, ಶಿಶುಕೇಂದ್ರ, ಕೆಲಸದಲ್ಲಿನ ತಾರತಮ್ಯ ಇಂತಹ ವಿಚಾರಗಳ ಸುತ್ತ ಒಂದು ದೊಡ್ಡ ಮಹಿಳಾ ಸಂಘಟನೆ ಸ್ಥಾಪಿಸಲು ಪ್ರಯತ್ನಿಸಿದರು. ಅಂಬಾಲುಪಾ ತಾಲೂಕ್ ಮಹಿಳಾ ಸಂಘವು ೧೯೪೩ರಲ್ಲಿ ಮೀನಾಕ್ಷಿ ಹಾಗೂ ಆಲಿಕುಟ್ಟಿಯ ನೇತೃತ್ವದಲ್ಲಿ ಪ್ರಾರಂಭವಾಯಿತು. ಈ ಮಹಿಳಾ ಸಂಘವು ಮಹಿಳೆಯರ ಕ್ರಿಯಾಶೀಲತೆಗೆ ದಾರಿಮಾಡಿಕೊಟ್ಟಿತು. ಹೀಗೆ ದುಡಿಯುವ ಸ್ತ್ರೀಯರನ್ನು ಸಂಘಟಿಸಲು ಮೀನಾಕ್ಷಿ ಹಾಗೂ ಆಲಿಕುಟ್ಟಿ ಕಾರ್ಮಿಕ ಸಂಘಟನೆಗಳ ಭಾಗದಿಂದ ಮಹಿಳಾ ಸಂಘಟನೆಗಳಿಗೆ ಕಾಲಿಟ್ಟರು. ಇವರಿಗೆ ಸ್ತ್ರೀ ಸಂಘಟನೆಗಳು ಏಕೆ ಅಗತ್ಯ ಎನಿಸಿತೆಂಬುದು ನಮಗೆ ಮುಖ್ಯ ಅಂಶ ಕಾರ್ಮಿಕ ಸಂಘಟನೆಗಳ ಭಾಗವಾಗಿಯೇ ಯಾಕೆ ಇವರು ದುಡಿಯುವ ಮಹಿಳೆಯರನ್ನು ಸಂಘಟಿಸಲಿಲ್ಲ? ಕಾರ್ಮಿಕ ಸಂಘಟನೆಗಳಲ್ಲಿ ಕ್ರಿಯಾಶೀಲರಾಗಲು ಸಾಧ್ಯವಾಗದಂತಹ ಪರಿಸ್ಥಿತಿ ಇತ್ತೆ? ಅಥವಾ ಕ್ರಿಯಾಶೀಲರಾಗುವ ಇವರ ಬಗ್ಗೆ ಅಸೂಯೆ ಹೆದರಿಕೆಗಳು ಪ್ರಾಧಾನ್ಯವಾಗಿ ಕೆಲಸ ಮಾಡಿದವೆ? ಈ ಐತಿಹಾಸಿಕ ಹೋರಾಟ ಕಾರ್ಮಿಕ ಸಂಘಟನೆ ಹಾಗೂ ಮಹಿಳಾ ಸಂಘಟನೆ ಕುರಿತು ಸಾಕಷ್ಟು ಪ್ರಶ್ನೆಗಳನ್ನು ನಮ್ಮ ಮುಂದೆ ಇಡುತ್ತದೆ.

ಈ ಹಂತದಲ್ಲಿ ಹೇಗೆ ಬಂಡವಾಳಶಾಹಿತ್ವ — ಪಿತೃಪ್ರಧಾನ ವ್ಯೌಲ್ಯಗಳ ವಿರುದ್ಧ ಹೋರಾಟ ನಡೆಸಬೇಕು? ಕ್ಲಾಸ್ ಮತ್ತು ಜೆಂಡರ್ ಎರಡನ್ನೂ ಒಟ್ಟಾಗಿ ಹೋರಾಡುವ ಅಗತ್ಯ ನಮ್ಮ ಮುಂದಿದೆ. ಈ ಎರಡೂ ಸಮಸ್ಯೆಗಳನ್ನು ಒಟ್ಟಾಗಿ ಹೋರಾಡುವ ಹಂತದಲ್ಲಿ ಕಾರ್ಮಿಕ ಸಂಘಟನೆಗಳು ಮತ್ತು ಮಹಿಳಾ ಸಂಘಟನೆಗಳ ಮಧ್ಯದ ಸಂಬಂಧ ಅಗತ್ಯ ಎಂಬುದನ್ನು ನಾವೆಲ್ಲರೂ ಇಂದು ಗಂಭೀರವಾಗಿ ಆಲೋಚಿಸಬೇಕಾಗಿದ.

---

## ಗ್ರಂಥಋಣ


1) ಬಾದ್ ಇಸಾಃ 1983; ವಿಮೆನ್ಸ್ ಇನ್ ದಿ ಇಂಡಿರ್ಯ ಟೆಕ್ಸ್‌ಟೈಲ್ ಇಂಡಿಸ್ಟ್ರೀ : ದಿ ಇರ್ಫ್ಲ್ಯೂಯನ್ಸ್ ಆಫ್ ಟೆಕ್ನಾಲಜಿ ಆ್ಯಂಡ್ ಆರ್‌ಗನೈಜೇಶನ್ ಆಫ್ ಜೆಂಡರ್ ಡಿವಿಜನ್ ಆಫ್ ಲೇಬರ್, ಬೆಲ್ ಬರ್ಗ್, ಡೆವಲಪ್‌ಮೆಂಟ್ ಸರ್ಚ್ ಇರ್‌ಸ್ಟಿಟ್ಯೂಟ್, ಪಿಆರ್‌ಪಿಎಸ್ ರಿಪೋರ್ಟ್, ನಂ.23

2) ಚಾಬ್ಬಿ, ಅಮೃತ : 1983, 'ದಿ ಕೇಸ್ ಆಫ್ 'ಇಂಡಿಯ' ಇನ್ ವೆಂಡಿ ಚೆಂಪಕಿಸ್ ಆ್ಯಂಡ್ ಸಿಂಥಿಯ ವರ್ಲ್ಯಕ್ (ಸಂಪಾ) 'ಆಫ್ ಕಾರ್ಮ್ ಕ್ಲಾತ್' ವಿರ್ಮೆ ಇರ್ ದಿ ಗ್ಲೋಬಲ್ ಟೆಕ್ಸ್‌ಟೈಲ್ ಇಂಡಸ್ಟ್ರೀ, ಟ್ರ್ಯಾನ್ ನ್ಯಾಷನಲ್ ಇರ್‌ಸ್ಟಿಟ್ಯೂಟ್, ಆ್ಯಮ್‌ಸ್ಟರ್‌ಡಮ್.

) ಗೊಥೋಸ್ಕರ ಸುಜಾತ, ಬನಾಜಿ ರೋಹಿನಿ, 1974; ಎ ಚಾಲೆಂಜ್ ಫಾರ್ ಯೂನಿಯನ್ಸ್; ವಿಮೆನ್ಸ್ ಎಂಪ್ಲಾಯಮೆಂಟ್ ಇರ್ ಫಾರ್ಮಸ್ಯುಟಿಕಲ್ಸ್ ಎಂಡ್ ಫುಡ್ ಇಂಡಸ್ಟ್ರೀಸ್, ಮಾನುಷಿ ನಂ 23.

4) ಗವರ್ನ್‌ಮೆಂಟ ಆಫ್ ಇಂಡಿಯ ; 1974 : ಟುವರ್ಡ್ಸ್ ಈಕ್ವಾಲಿಟಿ ; ರಿಪೋರ್ಟ್ ಆಫ್ ದ ಕಮಿಟಿ ಆರ್ ಸ್ಟೇಟಸ್ ಆಫ್ ವಿರ್ಮೆ ಇರ್ ಇಂಡಿಯ, ಡಿಪಾರ್ಟ್‌ಮೆಂಟ್ ಆಫ್ ಸೋಷಿಯಲ್ ವೆಲ್‌ಫೇರ್, ನ್ಯೂಡೆಲ್ಲಿ, ಡಿಸಂಬರ್.

5) ಐಯ್ಯರ್ ರಾಧಾಃ 1980; 'ದ ಯೂನಿಯನ್ಸ್ ಸೈಲೆಂಟ್ ಮೈನಾರಿಟಿ' ಇಂಡಿರ್ಯ ಎಕ್ಸಪ್ರೆಸ್ 10 ಮಾರ್ಚ್

6) ಜಾಬವಾಲಾ ರೇನಾನ; 1985; 'ಫ್ರಂ ದ ಮಿಲ್ ಟು ದ ಸ್ಟ್ರೀಸ್ಟ್ಸ್ಃ ಎ ಸ್ಟಡಿ ಆಫ್ ರಿಟ್ರೆಂಟ್‌ಮೆಂಟ್ ಆಫ್ ವಿರ್ಮೆ ಫ್ರಂ ಅಹಮದಾಬಾದ್ ಟೆಕ್ಸಟೈಲ್ ಮಿಲ್ಸ್' ನಂ 26 ಮಾನುಷಿ.

7) ಮಿತ್ರ ಮಾನೋಷಿಃ 1984; ವಿರ್ಮೆ ಆ್ಯಂಡ್ ಕ್ಲಾಸ್ ಸ್ಟ್ರಗಲ್ : ಎ ಸ್ಟಡಿ ಆಫ್ ಟ್ರೈಬಲ್ ಮೂರ್ವ್‌ಮೆಂಟ್ಸ್



# ಮಹಿಳಾ ಕಾರ್ಮಿಕರು — ಕಾರ್ಮಿಕ ಸಂಘಟನೆಗಳು.

ಅಂತರ ರಾಷ್ಟ್ರೀಯ ಕಾರ್ಮಿಕ ಸಂಘದ ಸಮೀಕ್ಷೆಯ ವರದಿಯಂತೆ ಇಂದು ಒಟ್ಟು ೬೭೪ ದಶಲಕ್ಷ ಮಹಿಳೆಯರು ವಿವಿಧ ಕ್ಷೇತ್ರಗಳಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಅಭಿವೃದ್ಧಿಶೀಲ ದಶಕಗಳಲ್ಲಿ ಮೂರನೇ ಎರಡರಷ್ಟು ಮಹಿಳೆಯರು ವ್ಯವಸಾಯದಲ್ಲಿ ತೊಡಗಿದ್ದಾರೆ. ಇನ್ನುಳಿದ ಮಹಿಳೆಯರು ಸೇವಾ ಕ್ಷೇತ್ರ ಹಾಗೂ ಕೈಗಾರಿಕೆ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ದಿನದಿನಕ್ಕೆ ಕಾರ್ಮಿಕ ಕ್ಷೇತ್ರದೊಳಗೆ ಪ್ರವೇಶಿಸುತ್ತಿರುವ ಮಹಿಳೆಯರ ಸಂಖ್ಯೆ ಹೆಚ್ಚುತ್ತಿದೆ. ವಿಶ್ವದ ಒಂದನೇ ಮೂರರಷ್ಟು ಮಹಿಳೆಯರು ತಮ್ಮ ಕುಟುಂಬವನ್ನು ಸಾಕುವುದು ಅನಿವಾರ್ಯವಾದ್ದರಿಂದ ದುಡಿಮೆಯ ಕ್ಷೇತ್ರದೊಳಗೆ ಅಡಿಯಿಡುತ್ತಿದ್ದಾರೆ. ಮಹಿಳೆಯರು ವಿಧೇಯರಾಗಿ ಇರುವುದರಿಂದ ಮನೆಯ ಒಳಗೂ ಹೊರಗೂ ದುಡಿಯುವ ಅವರ ಸಮಯವನ್ನು ಲೆಕ್ಕ ಹಾಕಿದರೆ ಪುರುಷರ ೨ ಪಟ್ಟು ಹೆಚ್ಚು ಕೆಲಸ ಮಾಡುತ್ತಾರೆ. ಆದರೂ ಅವರ ಗಳಿಕೆ ಪುರುಷರ ಗಳಿಕೆಗಿಂತ ಕಡಿಮೆ. ಇದಕ್ಕೆ ಶತ ಶತಮಾನಗಳಿಂದ ಪುರುಷ ಮತ್ತು ಮಹಿಳೆಯರ ನಡುವೆ ಇರುವ ಕಂದಕವೇ ಕಾರಣ. ಮತ್ತೊಂದು ಸಂಗತಿಯನ್ನು ಇಲ್ಲಿ ಹೇಳುವುದು ಅನಿವಾರ್ಯ. ಹೆಚ್ಚು ಹೆಚ್ಚು ಮಹಿಳೆಯರು ಇಂದು ದುಡಿಯುವ ಕ್ಷೇತ್ರವನ್ನು ಪ್ರವೇಶಿಸುತ್ತಿರುವುದರಿಂದ ಅವರನ್ನು ಶೋಷಿಸುತ್ತಿರುವ ಮಟ್ಟವು ಹೆಚ್ಚುತ್ತಿದೆ.

ಕಾರ್ಮಿಕ ಕ್ಷೇತ್ರಗಳಲ್ಲಿ ಅನುಸರಿಸುತ್ತಿರುವ ವಿಚಿತ್ರವೆನಿಸಿದರೂ ಸತ್ಯವಾದ ಸಂಗತಿ ಎಂದರೆ ಕೆಲಸದ ಅವಶ್ಯಕತೆಯ ಸಂದರ್ಭದಲ್ಲಿ ಕೆಲಸದ ಮೇಲಿನ ಮೊದಲ ಅಧಿಕಾರ ಗಂಡಿಗೆ ಎಂದು ನಿರ್ಧರಿಸಲ್ಪಟ್ಟಿರುವುದು. ಇದಕ್ಕೆ ಕಾರಣ ಹೆಣ್ಣಿನ ದುಡಿಮೆ ಗಂಡಿನ ದುಡಿಮೆಗೆ ಪೂರಕ ಎಂದು ಪರಿಗಣಿಸಲ್ಪಟ್ಟಿರುವುದು. ಹಾಗಾಗಿ ಸಮಾಜದಲ್ಲಿ ಆರ್ಥಿಕ ಸಂಕಷ್ಟಗಳು ಉಂಟಾದಾಗ ಪುರುಷ ತಂತಾನೆ ಮೊದಲ ಅರ್ಹತೆ ಗಳಿಸುತ್ತಾನೆ,

ಹೆಚ್ಚು ತಾಂತ್ರಿಕ ಅನುಭವವನ್ನು ಅಪೇಕ್ಷಿಸುವ ಕೆಲಸಗಳಿಂದ ಅವರು ವಂಚಿತರಾಗುತ್ತಿದ್ದಾರೆ. ಅವರ ಈ ತಾಂತ್ರಿಕ ಅನುಭವವನ್ನು ಹೆಚ್ಚಿಸುವ ತರಬೇತಿಯ ಪ್ರಯತ್ನ ನಡೆಯುತ್ತಲೇ ಇಲ್ಲ. ಹೀಗಾಗಿ ಕಡಿಮೆ ಸಂಬಳ, ಕನಿಷ್ಠ ಸೌಲಭ್ಯಗಳು, ಹೆಚ್ಚು ಘಂಟೆಗಳ ಕೆಲಸಗಳಿಂದ ಮಹಿಳಾ ಕಾರ್ಮಿಕರು ಜರ್ಜರಿತರಾಗುತ್ತಿದ್ದಾರೆ,

---


ಆ್ಯಂಡ್ ವಿಮೆನ್ಸ್ ಪಾರ್ಟಿಸಿಪೇಷನ್ ಇನ್ ಬಿಹಾರ್, ಇಂಡಿಯ. ಜಿನೇಮ, ಐ ಎಲ್ ಓ.

8) ವಿ ಎಚ್ ರೋಹಿನಿ; ಸುಜಾತ ಎಸ್ ವಿ; ನೀಲಂ ಸಿ; 1981: 'ಮೈ ಲೈಫ್ ಈಸ್ ಒನ್ ಲಾಂಗ್ ಸ್ಟ್ರಗಲ್, ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ರೀಸರ್ಚ ಆ್ಯಂಡ್ ಎಜುಕೇಷನ್, ಪ್ರಾತಿಕ್ಷಬಾಲ್ ಪ್ರಕಟಣೆ; ಬೆಳಗಾಂ.

೯) ವೇಲಾಯುಧನ್ ಮೀರ, ಸುಕುಮಾರಮ್, ವಿಮಲ ಪ್ರಸ್ಟಂಜೀ 198?; ರೋಲ್ ಆ್ಯಂಡ್ ಪಾರ್ಟಿಸಿಪೇಶನ್ ಆಫ್ ವಿಮೆನ್ ಇನ್ ವರ್ಕರ್ಸ್ ಮೂವ್‌ಮೆಂಟ್ ಇನ್ ದಿ ಕಾಯಿರ್ ಇಂಡಸ್ಟ್ರೀ ಇನ್ ಕೇರಳ (1938 — 1980. ಸೆಂಟರ್ ಫಾರ್ ವಿಮೆನ್ ಡೆವಲಪ್‌ಮೆಂಟ್ ಸ್ಟಡೀಸ್, ನ್ಯೂಡೆಲ್ಲಿ.

10) ವಿಮೆನ್ಸ್ ರೀಸರ್ಚ್ ಸೆಂಟರ್: 1984; ಕಂಟಿನ್ಯೂಯಲ್ ಡಿಸ್‌ಪ್ಲೇಸ್‌ಮೆಂಟ್, ವಿಮೆನ್ ವರ್ಕರ್ಸ್ ಇನ್ ದಿ ಕಾಟನ್ ಟೆಕ್ಸ್‌ಟೈಲ್ ಇಂಡಸ್ಟ್ರೀ ಇನ್ ಕಲ್ಕತ್ತ ನಂ 23, ಮಾನುಷಿ.

11) ರಾವ್ ವಿ .ಆರ್.; ಮತ್ತು ಹುಸೇನ್ ಎಸ್. : 1983, ವಿಮೆನ್ ವರ್ಕರ್ಸ್ ಇನ್ ದಿ ಗಾರ್ಮೆಂಟ್ ಎಕ್ಸ್‌ಪೋರ್ಟ್ ಇಂಡಸ್ಟ್ರೀ, ಡೆಲ್ಲಿ.

12) ಬ್ಯಾನರ್ಜಿ, ನಿರ್ಮಲ: 1985: ವಿಮೆನ್ಸ್ ವರ್ಕ ಆ್ಯಂಡ್ ಡಿಸ್‌ಕ್ರಿಮಿನೇಷನ್ ಇನ್ ದೇವಕಿ ಜೈನ್. ನಿರ್ಮಲ ಬ್ಯಾನರ್ಜಿ. ಸಂಪಾ: 'ವಿಮೆನ್ ಇನ್ ಪಾವರ್ಟಿ' ಶಕ್ತಿ ಬುಕ್ಸ್ ವಿಕಾಸ್ ಪಬ್ಲಿಷಿಂಗ್ ಹೌಸ್ ನ್ಯೂಡೆಲ್ಲಿ.

ಬಹಳಷ್ಟು ದೇಶಗಳಲ್ಲಿ, ಮನೆಗಳಲ್ಲಿ ಕೆಲಸಮಾಡುವ ಹೆಂಗಸರ ದುಡಿಮೆಯನ್ನು ಉತ್ಪಾದಿತ ಕಾರ್ಮಿಕ ಶಕ್ತಿ ಎಂದು ಪರಿಗಣಿಸುವುದೇ ಇಲ್ಲ. ಹಾಗಾಗಿ ಕಾರ್ಮಿಕರಿಗೆ ಯಾವುದೇ ಕಾನೂನಿನ ಸಹಾಯ ಒದಗುವುದಿಲ್ಲ. ಮಿತಿಯಿಲ್ಲದ ಕೆಲಸದ ವೇಳೆ ಹಾಗೂ ಯಾವುದೇ ಸೌಕರ್ಯಗಳಿಲ್ಲದ ಪರಿಸರ, ಕಾರ್ಮಿಕ ಸಂಘಟನೆಗಳ ದಿವ್ಯ ನಿರ್ಲಕ್ಷಗಳಿಂದ ಈ ಗೃಹ ಕಾರ್ಮಿಕರು ಪಡುತ್ತಿರುವ ಪಾಡು ಶಬ್ದಗಳಿಗೆ ಮೀರಿದ್ದು. ಈ ದಿವ್ಯ ನಿರ್ಲಕ್ಷ್ಯಕ್ಕೆ ಕಾರಣ, ಪುರುಷರ ಹಿಡಿತಲ್ಲಿರುವುದು. ಗೃಹ ಕಾರ್ಮಿಕರ ಕೆಲಸವನ್ನು ಉತ್ಪಾದಕತೆಯಲ್ಲಿ ಸೇರಿಸಿಕೊಳ್ಳದಿರುವುದು, ಹಾಗೂ ಗೃಹ ಕಾರ್ಮಿಕರನ್ನು ಕೈಗಾರಿಕಾ ಕಾರ್ಮಿಕರಂತೆ ಪರಿಗಣಿಸದಿರುವುದು. ಇದೇ ರೀತಿ ವಲಸೆ ಕಾರ್ಮಿಕರನ್ನು ಕಾಡುವ ಸಮಸ್ಯೆ ಎಂದರೆ ತಾವು ಬದುಕಿದ ನೆಲವನ್ನು ತೊರೆದು ಬದುಕಿಗಾಗಿ ದೂರ ದೂರ ಸಾಗಿ ಬರುವ ಈ ಮಹಿಳಾ ಕಾರ್ಮಿಕರನ್ನು ಪುರುಷ ಪ್ರಧಾನ ಈ ಸಮಾಜ ತನ್ನ ಇಷ್ಟಕ್ಕೆ ತಕ್ಕಂತೆ ಬಳಸಿಕೊಂಡು ಶೋಷಿಸುತ್ತಿರುವುದರಿಂದ ಅವರ ಬದುಕು ಅಸಹನೀಯವಾಗಿದೆ.

ಕಾರ್ಮಿಕ ಕ್ಷೇತ್ರಗಳಲ್ಲಿ ಮಹಿಳೆ ಎದುರಿಸುತ್ತಿರುವ ಒಂದು ಪ್ರಮುಖವಾದ ಸಮಸ್ಯೆ ಆಕೆಯ ಹೆಣ್ಣುತನವನ್ನು ತನ್ನ ಉಪಯೋಗಕ್ಕೆ ಬಳಸಿಕೊಳ್ಳುವ ಈ ಕೊಳೆತ ಸಮಾಜದ ಕೆಟ್ಟ ಬೆಳವಣಿಗೆ. ಎಲ್ಲೋ ಒಂದು ಮೂಲೆಯಲ್ಲಿ ಆಕೆಯನ್ನು ಕಾಡುವ ಸಾಮಾಜಿಕ ಹಾಗೂ ಸಮಾಜದ ದೃಷ್ಟಿಯಲ್ಲಿ ತಾನು ಗೇಲಿಗೊಳಗಾಗಬಹುದೆಂಬ ಭಯದಿಂದ ಆಕೆ ಅದನ್ನು ಬಹಿರಂಗ ಪಡಿಸಲು ಇಚ್ಛಿಸದಿರುವುದು ಹಾಗೂ ಆಕೆ ಅದನ್ನು ಬಹಿರಂಗ ಪಡಿಸದಂತೆ ಆಕೆಯ ಮೇಲೆ ದುಷ್ಟ ಶಕ್ತಿಗಳು ದೈಹಿಕವಾಗಿ, ಮಾನಸಿಕವಾಗಿ, ಒತ್ತಡ ತರುವುದರಿಂದ ಇಂತಹ ಮಹಿಳೆಯರ ಮೇಲೆ ನಡೆಯುವ ಈ ರೀತಿಯ ಶೋಷಣೆ ಹೊರಗ ಬಾರದೆ ಅಲ್ಲಿಯೇ ಸತ್ತು ಹೋಗುತ್ತದೆ. ಹಾಗಾಗಿ ಸಾರ್ವಜನಿಕ ವೇದಿಕೆಯಲ್ಲಿ ಇಂತಹ ಶೋಷಣೆಗೆ ಸ್ಥಾನ ಸಿಕ್ಕುವುದಿಲ್ಲ. ಇದರಿಂದ ಈ ಸಮಸ್ಯೆಯ ಬಗ್ಗೆ ಒಂದು ಸಾಮೂಹಿಕ ಸಾರ್ವಜನಿಕ ಅಭಿಪ್ರಾಯ ಮೂಡಿಸಲು ಸಾಧ್ಯವಾಗಿಲ್ಲ. ಎಲ್ಲಿಯವರೆಗೆ ಈ ರೀತಿಯ ಲೈಂಗಿಕ ಅತ್ಯಾಚಾರವನ್ನು ಹೆಣ್ಣು ತನ್ನ ವೃತ್ತಿಯಲ್ಲಿನ ಅನಿವಾರ್ಯತೆ ಎಂದು ಪರಿಗಣಿಸುತ್ತಾಳೋ ಎಲ್ಲಿಯವರೆಗೆ ಆಡಳಿತ ವರ್ಗ ಈ ನಡವಳಿಕೆಯನ್ನು ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯ ಎಂದು ಪರಿಗಣಿಸುವುದಿಲ್ಲವೋ ಅಲ್ಲಿಯವರೆಗೆ ಈ ಕ್ರಿಯೆ ನಿರಂತರವಾಗಿ ನಡೆದು ಹೆಣ್ಣಿನ ಆರ್ಥಿಕ, ದೈಹಿಕ ಹಾಗೂ ಮಾನಸಿಕ ಸಂಗತಿಗಳ ಮೇಲೆ ಒತ್ತಡ ತರುತ್ತಲೇ ಇರುತ್ತದೆ.

ಇಂದು ಹೆಚ್ಚು ಹೆಚ್ಚು ಮಹಿಳೆಯರು ಕಾರ್ಮಿಕ ಸಂಘಟನೆಯೊಳಗೆ ಬರುತ್ತಿದ್ದಾರೆ. ಆದ್ದರಿಂದ ವಿಶ್ವದ ಕಾರ್ಮಿಕ ಸಂಘಟನೆಯಲ್ಲಿ ಸಾಕಷ್ಟು ಬದಲಾವಣೆಗಳುಂಟಾಗುತ್ತಿದೆ. ಈ ಹೊಸ ಬದಲಾವಣೆ ಕಾರ್ಮಿಕರ ಚಟುವಟಿಕೆಗಳಾದ ಏಕತೆ, ಸಮಾನತೆ, ಹಾಗೂ ಐಕ್ಯತೆಗಳಿಗೆ ಸಾಕಷ್ಟು ಸವಾಲುಗಳನ್ನು ಒಡ್ಡುತ್ತಿದೆ. ಈಗ ನಮ್ಮ ಮುಂದಿರುವ ಪ್ರಶ್ನೆಯೆಂದರೆ, ಪುರುಷರೇ ಆಧಿಪತ್ಯ ಸ್ಥಾಪಿಸಿಕೊಂಡಿರುವ ಈ ಕಾರ್ಮಿಕ ಸಂಘಟನೆಯಲ್ಲಿ ಇದುವರೆಗೆ ತಾಯಿ, ತಂಗಿ, ಹೆಂಡತಿಯರ ತುಳಿತಕ್ಕೊಳಗಾಗಿರುವ ಮಹಿಳಾ ಕಾರ್ಮಿಕರು ಬರುತ್ತಿರುವುದನ್ನು ಅವರು ಹೇಗೆ ಸ್ವಾಗತಿಸುತ್ತಾರೆ? ಇವರನ್ನು ಮನೆಗಳಲ್ಲಿ ತೊತ್ತಿನಂತೆ ನಡೆಸಿಕೊಳ್ಳುತ್ತಿರುವ ಗಂಡಂದಿರು, ತಂದೆಯರು ಅಥವ ಅಣ್ಣಂದಿರೇ ನಾಯಕರಾಗಿರುವ ಈ ಕಾರ್ಮಿಕ ಸಂಘಟನೆಯ ಚಳುವಳಿಯಲ್ಲಿ ಮಹಿಳಾ ಕಾರ್ಮಿಕರು ಹೇಗೆ ಪ್ರತಿಕ್ರಿಯಿಸ ಬಲ್ಲರು? ಎಂಬುದು.

ತುಂಬು ವಿಧೇಯತೆಯಿಂದ ಕೆಲಸ ಮಾಡುವ ಮಹಿಳೆಯರು ಇಂದು ಕೆಲಸಕ್ಕಾಗಿ ಹಂಬಲಿಸಲು ಕಾರಣ ಆದಾಯದ ಕೊಳ್ಳುವ ಶಕ್ತಿ ಕಡಿಮೆಯಾಗಿರುವುದು. ಇದಕ್ಕೆ ವಿಶ್ವದ ಆಹಾರದ ದುಃಸ್ಥಿತಿಯೇ ಕಾರಣ. ಮಹಿಳಾ ಕಾರ್ಮಿಕರು ಅತ್ಯಂತ ಕಡಿಮೆ ಸಂಬಳಕ್ಕೆ ಈಗ ಕೆಲಸ ಮಾಡುತ್ತಿದ್ದಾರೆ. ಮುಂದೂ ಮಾಡುತ್ತಲೇ ಇರುತ್ತಾರೆ. ಇದಕ್ಕೆ ಮನೆಗಳಲ್ಲಿ ಹಾಗೂ ಸಮಾಜದಲ್ಲಿ ಅವರು ನಿರಂತರವಾಗಿ ತುಳಿತಕ್ಕೊಳಗಾಗಿರುವುದೇ ಕಾರಣ. ಇದಕ್ಕೆ ಕಾರ್ಮಿಕ ಸಂಘಟನೆಗಳು ಕೂಡ ಹೊರತಲ್ಲ.

ಈ ಸಂಗತಿಗಳು ಕೆಲಸದಲ್ಲಷ್ಟೇ ಅಲ್ಲ, ಕಾರ್ಮಿಕ ಸಂಘಟನೆಗಳಲ್ಲೂ ಮಹಿಳೆಯರ ಹೋರಾಟ ಅನಿವಾರ್ಯ ಎಂಬುದನ್ನು ಒತ್ತಿ ಹೇಳುತ್ತಿದೆ. ಈ ರೀತಿ ಪುರುಷ ಮತ್ತು ಸ್ತ್ರೀಯರ ನಡುವಿನ ಭೇದ ಕಾರ್ಮಿಕ ಸಂಘಟನೆಗಳಲ್ಲಿ ಅನಿವಾರ್ಯವೆ? ಅಥವ

ತಾರತಮ್ಯ ನೀತಿಯನ್ನು ಗುರುತಿಸಿ, ಅವುಗಳ ಮೇಲೆ ತೆರೆಯನ್ನೆಳೆದು ಹೆಚ್ಚಿನದೇನಾದರೂ ಸಾಧಿಸಲು ಸಾಧ್ಯವೆ ?

ಕೆಲವು ಪ್ರಶ್ನೆಗಳ ಹಿನ್ನೆಲೆಯಲ್ಲಿ ಕಾರ್ಮಿಕ ಸಂಘಟನೆಗಳ ರಚನೆ ಹಾಗು ಅವರ ಕಾರ್ಯಕ್ರಮ ಕುರಿತು ಗಮನಿಸಬೇಕಾಗಿದೆ. ಹೆಚ್ಚುಬಾರಿ ಕಾರ್ಮಿಕ ಸಂಘಟನೆಗಳು ಪುರುಷರ ಹಿಡತಲ್ಲಿರುವುದು ನಿರ್ವಿವಾದದ ಅಂಶ. ಮಹಿಳಾ ಕಾರ್ಮಿಕರ ಸಂಘಟನೆಗಳಲ್ಲೂ ಪುರುಷರ ಕೈವಾಡ ಇದ್ದೇ ಇರುವುದು ವಾಸ್ತವ ಸಂಗತಿ. ಈ ಸಂಘಟನೆಗಳ ಕಾರ್ಯನೀತಿ ಹಾಗೂ ಚಟುವಟಿಕೆಗಳು ಪಿತೃಪ್ರಧಾನ ಮೌಲ್ಯಾಧಾರಿತ ಎಂಬುದು ಮುಖ್ಯವಾದ ಅಂಶ. ಈ ಮೌಲ್ಯವನ್ನು ಸ್ತ್ರೀ ಕಾರ್ಮಿಕರೂ ಅನುಸರಿಸಿಕೊಂಡು ಹೋಗುತ್ತಿರುವುದು ಅನಿವಾರ್ಯವಾಗಿದೆ. ಈ ಕಾರಣದಿಂದಾಗಿ ಹೆಚ್ಚು ಹೆಚ್ಚು ಮಹಿಳೆಯರು ಕಾರ್ಮಿಕ ಸಂಘಟನೆಗಳಲ್ಲಿ ಸಕ್ರಿಯವಾಗಿ ಪಾಲುಗೊಂಡರೂ ಅದರ ಮೂಲ ರಚನೆಯಲ್ಲಿ ಬದಲಾವಣೆ ಕಂಡು ಬಂದಿಲ್ಲ.

ವರ್ಗ ಹೋರಾಟ, ಜಾತಿ ಹೆಣಗಾಟದೊಂದಿಗೆ ಮಹಿಳೆ ಪಿತೃಪ್ರಧಾನ ಸಂಸ್ಥೆಯ ವಿರುದ್ಧ ನಿರಂತರವಾಗಿ ಹೋರಾಡಬೇಕಿದೆ. ಈ ಸಂಸ್ಥೆ ಹೆಣ್ಣನ್ನು ಎರಡನೇ ದರ್ಜೆ ಪ್ರಜೆ ಎಂದು ಪರಿಗಣಿಸಿದೆ. ಇದರಿಂದಾಗಿ ಹೆಣ್ಣು ಕೀಳು ಎಂದು ಬಗೆದು ಪುರುಷ ಆಕೆಯ ಮೇಲೆ ದಬ್ಬಾಳಿಕೆಯೊಂದಿಗೆ ಸತತವಾಗಿ ಲೈಂಗಿಕ 'ಅತ್ಯಾಚಾರ ನಡೆಸಿಕೊಂಡು ಬರುತ್ತಿದ್ದಾನೆ.

ಈ ಸಂಸ್ಥೆಯಲ್ಲಿ ಮನೆಯ ಸಂಪೂರ್ಣ ಜವಾಬ್ದಾರಿ ಹೆಣ್ಣಿಗೆ ಸೇರಿದ್ದು. ಈ ಮೊದಲೇ ಹೇಳಿದಂತೆ ಹೆಣ್ಣು ಒಳಗೆ ದುಡಿಯುವುದರೊಟ್ಟಿಗೆ ಹೊರಗೆ ದುಡಿಯುವುದೇಕೆಂದರೆ, ಒಬ್ಬರ ಆದಾಯದ ಕೊಳ್ಳುವ ಶಕ್ತಿ ಕಡಿಮೆಯಾಗಿರುವುದು, ಐ. ಎಲ್. ಓ. ವರದಿಯಂತೆ, ವಿಶ್ವದ ಒಂದನೇ ಮೂರರಷ್ಟು ಮಹಿಳೆಯರು ಕುಟುಂಬ ಸಾಕುವುದು ಅನಿವಾರ್ಯ.

ದುಡಿಯುವ ಅನಿವಾರ್ಯತೆ ಇದ್ದಲ್ಲೂ ಇಲ್ಲದಿದ್ದಲ್ಲೂ ಮಹಿಳೆ ತನ್ನನ್ನು ಸಮಾಜದ ವಿವಿಧ ಕ್ಷೇತ್ರಗಳಲ್ಲಿ ತೊಡಗಿಸಿಕೊಳ್ಳಲು ಮನೆಯಿಂದ ಹೊರಗೆ ಬಂದು ಬೇರೆ ಬೇರೆ ಕಾರ್ಯಕ್ಷೇತ್ರಗಳಲ್ಲಿ ಆಸಕ್ತಿ ವಹಿಸಬೇಕಾಗುತ್ತಿದೆ. ಇಂಥ ಪರಿಸ್ಥಿತಿಯಲ್ಲಿ ಮನೆಯೊಳಗಿನ ದುಡಿಮೆ, ಹೊರಗಿನ ದುಡಿಮೆ ಮಹಿಳೆಯ ದೈಹಿಕ ಮಾನಸಿಕ ಸಂಗತಿಗಳ ಮೇಲೆ ತೀವ್ರ ಪರಿಣಾಮವುಂಟಾಗುತ್ತವೆ. ಮನೆಯ ಒಳಗೂ ಹೊರಗೂ ದುಡಿವ ಆಕೆಯ ಸಮಯ ಲೆಕ್ಕ ಹಾಕಿದರೆ. ೭ ದಿನಗಳಲ್ಲಿ ಒಟ್ಟು ೯೯.೯ ಘಂಟೆಗಳ ಕಾಲ ವ್ಯಯಿಸುವ ಸಂಗತಿಯ ಬಗೆ ಐ. ಎಲ್. ಓ. ವರದಿ ಮಾಡಿದೆ, ಗಂಡು ಹೊಗೆ ದುಡಿದು ಗಳಿಸಬೇಕು, ಹೆಣ್ಣೇ ಮನೆಯ ಮಕ್ಕಳ ಪೋಷಣೆ ಮಾಡಬೇಕೆಂಬ ಶ್ರಮ ವಿಭಜನೆಯ ನಿಲುವು ಬಹಳ ಪುರಾತನದ್ದು. ಈಗಿನ ಪರಿಸ್ಥಿತಿಗೆ ತಕ್ಕಂತೆ ಕುಟುಂಬದ ರಚನೆ ಪುನರ್‌ವ್ಯಾಖ್ಯಾನಗೊಳ್ಳಬೇಕಿದೆ. ಮನೆಯಲ್ಲಿ ದುಡಿಯುವ ಹೆಣ್ಣಿನ ಕೆಲಸಕ್ಕೆ ಆರ್ಥಿಕ ಆದ್ಯತೆ ಕೊಡದೇ ಜನ್ಮಸಿದ್ಧ ಕರ್ತವ್ಯವೆಂದು ನಿರ್ಧರಿಸಲ್ಪಟ್ಟಿದೆ.

ಮಹಿಳೆ ಎದುರಿಸುತ್ತಿರುವ ಈ ಸಮಸ್ಯೆಗಳತ್ತ ಕಾರ್ಮಿಕ ಸಂಘಟನೆಗಳ ನಿಲುವು ಎಂತದ್ದು ಎಂಬ ಪ್ರಶ್ನೆ ಏಳುವುದು ಸಹಜ. ಮಹಿಳಾ ಕಾರ್ಮಿಕರಿಗೆ ಸಂಬಂದ ಪಟ್ಟ ಈ ಸಮಸ್ಯೆಗಳನ್ನು ಕಾರ್ಮಿಕ ಸಂಘಟನೆಗಳು ಗಂಭೀರವಾಗಿ ಪರಿಗಣಿಸದೇ ಇರುವುದಕ್ಕೆ ಮಹಿಳಾ ಸಮಸ್ಯೆಗಳು ಕಾರ್ಮಿಕ ಸಂಘಟನೆಗಳ ಹಾದಿ ತಪ್ಪಿಸುತ್ತವೆಂದು, ಸಂಘಟನೆಗಳಲ್ಲಿ ಬಿರುಕು ಉಂಟಾಗುವುದು" ಎಂಬ ತಪ್ಪು ಕಲ್ಪನೆಯೆ ಕಾರಣ.

ಆದರೆ ಈ ೨ ಮಹಿಳಾ ಸಮಸ್ಯೆಗಳು ಗಂಡಿನ ಸ್ವಾತಂತ್ರ್ಯವನ್ನು (ಸ್ವೇಚ್ಛೆ) ಕಾಯ್ದಿರಿಸುವಲ್ಲಿ ಪೂರಕವಾಗುವುದರಿಂದ ಮತ್ತು ಆ ಗಂಡೇ ಕಾರ್ಮಿಕ ಸಂಘಟನೆಗಳಲ್ಲಿಯ ಸದಸ್ಯ ಅಥವ ನಾಯಕನಾಗಿರುವುದರಿಂದ ಇವುಗಳ ಬಗ್ಗೆ ಪ್ರಗತಿಯುತ ನಿಲುವು ತೆಗೆದುಕೊಳ್ಳುವ ಪ್ರಯತ್ನ ಸಹ ನಡೆಯುವುದಿಲ್ಲ.

ಪಿತೃ ಪ್ರಧಾನ ಸಂಸ್ಥೆಯ ಮೌಲ್ಯಗಳು, ಮಹಿಳೆ ಅನುಭವಿಸುತ್ತಿರುವ ಈ ಅಮಾನವೀಯ ತುಳಿತಕ್ಕೆ ನೇರ ಕಾರಣ ಎಂಬ ಕಠಿಣ ಸತ್ಯವನ್ನು ಒತ್ತಿ ಒತ್ತಿ ಹೇಳುತ್ತೇವೆ. ಆದುದರಿಂದ ಸಂಘಟಾನೆಗಳ ಇತರ ಹೋರಟಗಳೊಂದಿಗೆ ಮಹಿಳೆಯ ಹಕ್ಕನ್ನು ರಕ್ಷಿಸುವಲ್ಲಿ ಮುನ್ನಡೆಯಬೇಕಿದೆ. ಸಾಕಷ್ಟು ಮಹಿಳಾ ಸಂಘಟನೆಗಳು ಈ ನಿಟ್ಟಿನಲ್ಲಿ ಈಗಾಗಲೇ ಕೆಲಸ ಮಾಡುತ್ತಿರುವುದರಿಂದ ಕಾರ್ಮಿಕ ಸಂಘಟನೆಗಳು ಈಂತಹ ಗುಂಪುಗಳೊಂದಿಗೆ ಜೊತೆಗೂಡಿ ಹೋರಾಟ ನಡೆಸಬೇಕಿದೆ.

ಮೇಲೆ ಹೇಳಿದ ಕೆಲವು ಅನಿವಾರ್ಯ ಸಂಗತಿಗಳ ಹಿನ್ನೆಲೆಯಲ್ಲಿ ಇದುವರೆವಿಗೆ ಗಂಡಸರ ಹಿಡಿತದಲ್ಲಿದ್ದು, ಅವರಿಂದೇ, ಅವರಿಗೋಸುಗ, ಅವರಿಗಾಗಿ

ನಿರ್ಮಿತಿಗೊಂಡ ಸಂಘಟನೆಯ ರೂಪ ರೇಖೆಗಳನ್ನು ಕಾರ್ಯಕ್ರಮ ಹಾಗೂ ನಿಯಮಗಳನ್ನು ಬದಲಿಸಿಕೊಳ್ಳಬೇಕು. ಇದರಿಂದಾಗಿ ಮಹಿಳೆಯರು ಸಂಘಟನೆಯ ಚಟುವಟಿಕೆಗಳಲ್ಲಿ ಪ್ರತಿಯೊಂದು ಹಂತದಲ್ಲೂ ಪಾಲ್ಗೊಳ್ಳಲು ಅನುಕೂಲವಾಗುವುದು.

ಮಹಿಳಾ ಕಾರ್ಮಿಕರಿಗೆ, ಸಂಘಟನೆಯ ಪರಿಕ್ರಮಗಳಲ್ಲಿ ನಾಯಕತ್ವ ಪಡೆಯಲೂ ಸೂಕ್ತ ತರಬೇತಿ ಕಾರ್ಯಕ್ರಮವನ್ನು ರೂಪಿಸಬೇಕು. ಮಹಿಳೆಯರು ಸಂಘಟನೆಯ ಸರ್ವತೋಮುಖ ಬೆಳವಣಿಗೆಗೆ ತಕ್ಕ ಕಾಣಿಕೆ ನೀಡಬಲ್ಲರು.

ಶಿಶುಪೋಷಣೆ, ಎರಡು ಕಡೆಯ ದುಡಿತ. ಲೈಂಗಿಕ ಅತ್ಯಾಚಾರಗಳ ಬಗ್ಗೆ ವಿಶೇಷ ಕಾಳಜಿ ವಹಿಸಿ ಸಂಘಟನೆಯ ಕಾರ್ಯಸೂಚಿಯಲ್ಲಿ ಪ್ರಮುಖ ಸಂಗತಿ ಎಂದು ಭಾವಿಸಬೇಕು. ಮಹಿಳೆ ಎದುರಿಸುತ್ತಿರುವ ಈ ದಿನ ನಿತ್ಯದ ಬವಣೆಗಳಿಗೆ ಸಂಘಟನೆಯ ಕಾರ್ಯಗಳಲ್ಲಿ ಮನಃಪೂರ್ವಕವಾಗಿ ಭಾಗವಹಿಸುವರೆಂಬುದು ಖಂಡಿತ.

ಪ್ರಗತಿ ಪರ ಹೋರಾಟ ನಡೆಸಿರುವ ನಮ್ಮ ಕಾರ್ಮಿಕ ಸಂಘಟನೆಗಳು ಈಗಾಗಲೇ ಪಟ್ಟಿ ಮಾಡಿದ ಕೆಲವು ಮಹಿಳಾ ಸಮಸ್ಯೆಗಳನ್ನು (ಅಸಮಾನ ವೇತನ· ನಿರ್ದಿಷ್ಟ ಕೆಲಸದ ಅವಧಿ) ಗಂಭೀರವಾಗಿ ಪರಿಗಣಿಸಿ ರಾಜಕೀಯ ಒತ್ತಡ ತರಬಲ್ಲವು. ಈ ಮೂಲಕ ಸಾಮಾಜಿಕ ಅಭಿಪ್ರಾಯವನ್ನು ಮೂಡಿಸಿ ಆಕೆಗೆ ರಕ್ಷಣೆಯನ್ನೊದಗಿಸುವ ಶಾಸನವನ್ನು ತರಲು ಒತ್ತಾಯಿಸಬಹುದು. ಈ ಎಲ್ಲ ವಿಚಾರಗಳ ಹಿನ್ನೆಲೆಯಲ್ಲಿ ನಮ್ಮ ಕಾರ್ಮಿಕ ಸಂಘಟನೆಗಳು ಮಹಿಳಾ ಕಾರ್ಮಿಕರನ್ನು ಸಂಘಟಿಸಲು ವಿಫಲರಾದಲ್ಲಿ ಅದು ಕೂಡ ಶತಶತಮಾನಗಳಿಂದ ಮಹಿಳೆಯರನ್ನು ಶೋಷಿಸುತ್ತಿರುವ ಸಮಾಜದ ಒಂದು ಭಾಗ ಎಂದುಕೊಳ್ಳುವ ಕಾಲ ದೂರದಲ್ಲಿಲ್ಲ.

ಪುರುಷ ಮತ್ತು ಮಹಿಳಾ ಕಾರ್ಮಿಕರ ನಡುವೆ ಸಮಾನತೆ ಇಲ್ಲದಿದ್ದಲ್ಲಿ ಕೆಲಸ ಮಾಡುವ ಸ್ಥಳದಲ್ಲಾಗಲೀ ಅಥವ ಕಾರ್ಮಿಕ ಸಂಘಟನೆಗಳಲ್ಲಾಗಲೀ ಏಕತೆ ಮತ್ತು ಐಕ್ಯತೆ ಸಾಧಿಸುವುದು ಸಾಧ್ಯವೇ ಇಲ್ಲ. ಹಾಗೆಯೇ ಮನೆಗಳಲ್ಲಿ ಹಾಗೂ ಕೆಲಸದ ಸ್ಥಳಗಳಲ್ಲಿ ಪುರುಷ ಮತ್ತು ಸ್ತ್ರೀಯರ ನಡುವಿನ ರೇಖೆ ಅಳಿಸಿ ಹೋಗುವವರೆಗೂ ನಮ್ಮ ಕಾರ್ಮಿಕ ಸಂಘಟನೆಗಳಲ್ಲಿ ಐಕ್ಯತೆ ಅನಿವಾರ್ಯ.

**ಸವಿತ ಎ.**

---

# ಗ್ರಾಮೀಣ ಹೆಣ್ಣು

ಭಾರತೀಯ ಎಲ್ಲಾ ವರ್ಗದ ಹೆಣ್ಣುಗಳು ಅನೇಕ ರೀತಿಯ ಶೋಷಣೆಗಳಲ್ಲಿ ನಲುಗುತ್ತಿರುವುದು ಒಂದು ಕಹಿ ಸತ್ಯ. ಆದರೆ ಒಂದಿಷ್ಟೂ ತಿಳುವಳಿಕೆ ಇಲ್ಲದೆ, ಮೂಕವಾಗಿ ಹೆಣಗುತ್ತಿರುವ ಗ್ರಾಮಾಂತರ ಹೆಣ್ಣು ಮಕ್ಕಳ ಅದರಲ್ಲೂ ತೀರ ಕೆಳವರ್ಗದ ಹೆಂಗಸರು, ಹಿಂದಕ್ಕೇ ಉಳಿದುಕೊಂಡಿರುವ ಹಳ್ಳಿಗಾಡು ಮುಗ್ಧೆಯರ ಎಣೆಯಿಲ್ಲದ ಸಮಸ್ಯೆಗಳಿಗೆ ಪರಿಹಾರ ಕಾಣಲು ಇನ್ನೂ ಅದೆಷ್ಟು ದಶಕಗಳು ಕಳೆಯಬೇಕೋ ಅನಿಸುತ್ತದೆ. ಕಾರಣವೆಂದರೆ, ಮುಖ್ಯವಾಗಿ ಸಾಮಾಜಿಕ ಕಟ್ಟುಕಟ್ಟಳೆಗಳೂ ಸೇರಿದಂತೆ, ಶಿಕ್ಷಣದ ಗಂಧವೇ ಇಲ್ಲದಂತ ಮುಗ್ಧ, ಮೌಢ್ಯ ಹಿನ್ನೆಲೆಗಳಿಂದಲೂ ಶೋಷಣೆಗಳಿಗೆ ಒಳಗಾಗಿ ಸಂಕಷ್ಟಗಳ ತೆಕ್ಕೆಗೇ ಸುತ್ತಿಕೊಳ್ಳುವುದರಿಂದ ವೈರಾಗ್ಯದ ಕರ್ಮ ಸಿದ್ಧಾಂತವೆನ್ನುವಂತೆ, ಹೆಣ್ಣು ಜನ್ಮದ ಪಾಡು ತೀರಲಾಗದ ಕಥೆಯಾಗಿ ಪರಿಣಮಿಸಿದೆ.

ಹಳ್ಳಿಗಳಲ್ಲಿ ಹುಟ್ಟಿ ಬೆಳೆದು ಅಲ್ಲೇ ತಮ್ಮ ಜೀವಮಾನ ಸವೆಸುವ ಹೆಣ್ಣುಗಳು ಶ್ರಮ ಜೀವನಕ್ಕೆ ಬಿಡುವಿಲ್ಲದ ದುಡಿತಕ್ಕೆ ತಮ್ಮ ಪೂರ್ಣ ಬದುಕನ್ನ ಒಡ್ಡಿಕೊಂಡರೂ ಸಹ ಸಾರ್ಥಕವಿಲ್ಲದೆ, ಸರಿಯಾದ ಪ್ರತಿಫಲವಿಲ್ಲದೆ, ತಮ್ಮ ಬೆವರನ್ನು ಧಾರೆಯರೆಯ ಬೇಕಾಗುತ್ತದೆ. ಕೆಲವು ಸಾಮಾಜಿಕ ರೀತಿ ನೀತಿಗಳಿಂದ ಕೂಡಾ ತನ್ನ ಶ್ರಮಕ್ಕೆ ಬೆಲೆಯಿಲ್ಲದೆ, ತನ್ನದೇ ದುಡಿತದ ಮೂಲ ಆಸ್ತಿಯಿಂದ ವಂಚಿತಳಾಗಬೇಕಾದ್ದು ತೀರ ಸಾಮಾನ್ಯವೆನ್ನುವಂತಾಗಿ ಬಿಟ್ಟಿದೆ.

ಮಧ್ಯಮ ವರ್ಗ ಹಾಗೂ ಕೆಳ ವರ್ಗದ ಹೆಂಗಸರು ಮುಕ್ಕಾಲು ಜೀವಮಾನ ದೇಹ ದಂಡನೆಯ ಕೃಷಿಕೆಲಸ ನಡೆಸಿದ್ದರೂ ಸಹ ಇಳಿವಯಸ್ಸಿನಲ್ಲಿ ಯಾವುದೇ ಸುಖ ಪ್ರತಿಫಲ ಕಾಣದೆ ಇಳಿವಯಸ್ಸಿನ ಕಷ್ಟ ನಷ್ಟಗಳಲ್ಲಿ ತೊಳಲಾಡುವ ಪರಿಯಂತೂ ತುಂಬಾ ಶೋಚನೀಯವಾದದ್ದು.

ಆ ರೀತಿಯ ಕೆಲವು ಹೆಂಗಸರ ಕತೆ ಉದಹರಿಸಬೇಕೆನಿಸುತ್ತದೆ. ಅಡಿಕೆಲೆಸಂಚಿಯ ದುಮ್ಮು ಜಾಡಿಸುತ್ತ ತನ್ನ ದೀರ್ಘ ಬದುಕಿನ ಕತೆಯ ವ್ಯಥೆಯಲ್ಲಿ 50ವರ್ಷ ದುಡಿದು ಹಣ್ಣಾದರೂ ಸುಖ ವಿಶ್ರಾಂತಿ ಕಾಣದ ಗೌರಮ್ಮ ತನ್ನದೇ ಭಾಷೆಯಲ್ಲಿ ಹೀಗೆ ಒದರುತ್ತಾಳೆ.

"ಏನ್ ಕೇಳಿರಾ ಬುಡಿ ಅಮ್ಮಯ್ಯಾ, ನಮ್ಮಂತ ಹಳ್ಳಿ ಮುಕ್ಕಗಳ ಗೋಳ್ನಾ. ಅತ್ತ ಅರೀಲಾಗ್ದು ಇತ್ತ ಬುಡಸ್ಕೋಣಕಾಗ್ದು. ಓ ಲಕ್ಷ್ಮಣೇಂತ ವೊನವಾಸನೀಸಿದ ಆ ಸೀತಾಮಾತಾಕ್ಕೇ, ರವಷ್ಟು ಸುಖಸಿಗಲಿಲ್ಲ. ಗಂಡ್ಸು ಅನಿಸ್ಕಂಡ ಗಂಡ ಆ ರಾಮಚಂದ್ರನಿಂದ ಆ ಸೀತಮ್ಮನಿಕ ಕೊನೀವರ್ಗೂ ಕಷ್ಟವೇ ಬೋಗ್ಸಬೇಕಾಯ್ತು. ಅವತ್ನಿಂದ ಈವತ್ನ ತನಕ ಒಂದೇ ಗೋಳಾಗದೆ ಹೆಣ್ಣುಗಳ ಪಾಡು. ನಂದೇ ಪಾಡು ಯೇಳ್ತೀನಿ ಕೇಳೀರಾ? ಅಷ್ಟಿಷ್ಟು ವೊಟ್ಟೆ ಬಟ್ಟೆಗೆ ತಾಪತ್ರಿಲ್ಲದ ಮ್ನನೀಗೆ ಹುಟ್ಟಿದ ನಾನು ಸೇರಿದ ಮನಿ ವಸೀ ಬಡತನದ್ದು. ಅಂಗಂತ ತೌರಆಸ್ತಿಗೆ ವೋದೋಳಲ್ಲ ನಾನು.



ಗಂಡನ ಮನಿಕ ಕಾಲಿಟ್ಟಾಗ್ನಿಂದ ನೋಡ್ಕಳಿ: ಕೋಳಿ ಕರಕ್ ಅಂದಾಗ ಎದ್ದುಬುಟ್ರೆ ಇಡೀ ದಿನಾ ನಾಲ್ಕಾಳುಗೇಯೋದ್ನ ಒಬ್ಬಳೇ ದುಡ್ದು ನಂಪಾಲಿಗೆ ಬಂದ ಬರಡು ನೆಲ ಕದ್ದು ಅಸನು ಮಾಡಿ ವೊಲಗದ್ದೆ, ತ್ವಾಟ ತಡಿಕೆ ಮನಿವೊಪ್ಪಾರ ಇಸ್ತಾರ ಮಾಡ್ದೆ. ಅಷ್ಟಲ್ದ ಕೈಗೆ ಒಸಿ ಅಣ ಬರ್ಲೀಂತ ದನಕರ, ಆಡು, ಕುರಿಕೋಳಿ ಸಾಕಿ ಗುಂಪು ಗುಂಪು ಬೆಳುಸ್ದೆ. ಹಿಂಗೆ ಎಲ್ಲಾ ತರನಿಂದ ಉಟ್ಟುವಳಿ ಮಾಡಿ ಮಾಡಿಕಂಡು ಅಷ್ಟಿಷ್ಟು ಒಡವೆ ವಸ್ತು, ಪಾತ್ರೆ, ಪಡಗ ಆಸ್ತಿಪಾಸ್ತೀಂತ ಎಲ್ಲಾ ಇಸ್ತುಗಳಿಂದ ಸಂಸಾರ ಆಯಕಟ್ಟು ಮಾಡ್ದೆ. ಇಷ್ಟು ದುಡ್ದು ನೇರ ಮಾಡ್ದ ನನ್ನ ಸಂಸಾರ ಇರಲಿ ಮಕ್ಕಳ್ನಂತೂ ಪಾಣದಾಗೆ ಪಾಣ ಇಟ್ಟು ಗಿಣಿಗಳಂತೆ ಸಾಕಿ ಅವೂ ಅಂದ ಚಂದನಾಗಿ ಬದುಕುಕ್ಕೆ ಎಷ್ಟು ಬೇಕೋ ಅಷ್ಟೂ ಸಂಸಾರ ಒಪ್ಪ ಮಾಡಿಟ್ಟೆ ಅಂದ್ರ ಎಲ್ಲಾ ಆಸ್ತಿ ಪಾಸ್ತಿ ನನ್ನ ಗಂಡ ಹೆಸರ್ನಾಗೆ ಮಡಗಿದ್ದು. ಆಯ್ಸು ತೀರಿ ನನ್ನ ಗಂಡ ಸತ್ತ ಮ್ಯಾಕೆ ನನ್ ಕತೀನೆ ಬ್ಯಾರಾತು. ಗಂಡು ಮಕ್ಳು ಅನಿಸ್ಕೊಂಡೋವು ಅಪ್ಪ ಸತ್ತ ಸಂತ್ರ ನನ್ನ ಕಷ್ಟಾರ್ಜಿತದ ಆಸ್ತೀನೆಲ್ಲಾ ಗೆರೆ ಗೀನಿದಂತೆ, ತುಂಡುಮಾಡಿ ಹಂಚಿಕೊಂಡ್ರು. ಈಗ ಎಂತಾ ಎತ್ಯಾಸಿ ಬಂತೂ ಅಂದ್ರ ಇಡೀ ಜೀವಮಾನ ದೇಹಸಮಿಸಿ ಕೂಡಿಟ್ಟು ದೊಡ್ಡದು ಮಾಡ್ದ ನನ್ನ ಆಸ್ತಿಕ ನಾನೇನೂ ಅಕ್ಕುದಾರಿ ಅಲ್ಲ. ಮಗಂದ್ರು ಸೊಸೀರು ಮುಸುಡಿ ಸೊಟ್ಟಗೆ ತಿರುವಿಕಂಡು ಹಾಕುವ ಮುದ್ದೆಗೆ ಕಾದು ಬಿದ್ದಿರ ಬ್ಯಾಕು. ಬೆವರು ಸುರಿಸಿ ಬೆಳಸಿದ ನನ್ನ ಆಸ್ತಿ ಅರ್ಥ ಯಾವುದು ನನ್ನ ಕೈಯಾಗಿಲ್ಲದೆ ಒತ್ತಲಾದ ಕಾಟಾಸ್ಯಾರದ ಜೀವವಾಗಿ ಎಲ್ಲರಿಕೂ ವೊರಿ ಆಗಿವ್ನಿ. ಈ ಕಾಲ್ದಾಗೆ ಊರೂರ್ನಾಗೆ ರಾಕಾಸಿಗಳಂತೆ ಒಕ್ಕರಿಸೋ ಮೆಸೀನುಗಳಿಂದ ನನ್ನ ಕೈಲಾಗುವ ಕೆಲಸಗಳಾದ ಕುಟ್ಟುವ ಬೀಸುವ ಕೇರುವ ಮಾಟುವ ಕೈ ಕೆಲಸಗಳಿಕ ಕೂಡ ಬೆಲೀ ಇಲ್ದಂಗಾಗದೆ ನನ್ನ ಬದುಕೆ ದುಸ್ತರ ಆಗ್ಬುಟ್ಟದೆ ನನ್ನ ನಿಸೂರು ಬಾಳ ಎಂದು ಕೊನಿ ಆದೀತೋ ಅಂತ ಕಾದಿವ್ನಿ."

ಜೀವವೇ ದುರ್ಭರವೆನಿಸಿದ ಇಂತ ಗೌರಮ್ಮಗಳು ಪ್ರತಿ ಹಳ್ಳಿ ಪ್ರತಿ ಕೇರಿಯ ಓಣಿ ಓಣಿಗಳಲ್ಲೂ ಇದ್ದಾರೆ. ಮೇಲಿನ ಕತೆ, ಮಧ್ಯಮ ವರ್ಗದ ಹೆಂಗಸರ ಕತೆ ಆದರೆ ಇನ್ನೂ ಕೆಳವರ್ಗದ ಕೂಲಿನಾಲಿ ಮಾಡಿ, ಹೊಟ್ಟೆ ಹೊರೆಯುವ ಹೆಣ್ಣುಗಳ ಪಾಡಂತೂ ಅತ್ಯಂತ ಶೋಚನೀಯವೆನ್ನಬೇಕು. ಕೇವಲವ್ಯವಸಾಯಿಕ ಶ್ರಮಿಕ ವರ್ಗವಾದ ಈ ಹೆಂಗಸರ ಪಾಲಿಗೆ ಸ್ವಂತದೆನ್ನುವ ಯಾವುದೇ ಆಸ್ತಿ ಪಾಸ್ತಿ ಆಸರೆಗಳಿರುವುದು ಬಹಳ ಕಡಿಮೆ. ಮಳೆ ಬಂದು ಬೆಳೆ ಬೆಳೆದರೆ ಮಾತ್ರ ಕೂಲಿಯ ದುಡಿತದಿಂದ ಜೀವನ ಸಾಗಬೇಕಿರುವ ಇವರಿಗೆ ತುಂಬಾ ಅತಂತ್ರವೆನ್ನುವ ವರಮಾನ. ಹಲವಾರು ವರ್ಷಗಳೇ ಮಳೆಬಾರದೆ 'ಬರ' ಬಡಿಯುವ ಬಯಲು ಜಿಲ್ಲೆಗಳಲ್ಲಿ ಒಂದು ಹೊತ್ತಿನ ಗಂಜಿ ಹೊಟ್ಟೆಪಾಡಿಗೂ ತಹತಹಿಸುವಂತಹ ಪರಿಸ್ಥಿತಿ, ಕೂಲಿನಾಲಿ ಸಿಕ್ಕದೆ ಗುಳೇ ಹೋಗುವಂತ ಸಂಕಷ್ಟ. ಇಂತಹ ಯಾತನಾ ಸಮಾಜಗಳ ಸಂಸಾರಗಳಲ್ಲಿ ಹೆಣ್ಣು ಗಂಡು ಎಲ್ಲರೂ ಒಳಗೊಳ್ಳುವಂತ ಕಷ್ಟಗಳ ದಯನೀಯತೆ ಇರುವುದಾದರೂ ಕುಟುಂಬದ ಹಸಿವು, ಬಾಯಾರಿಕೆ, ನೋವು ಬಾಧೆಗಳ ಹೆಚ್ಚಿನ ಪರಿಣಾಮ ಹೊತ್ತುಕೊಳ್ಳುವುದು ಹೆಂಗಸೇ ಆದ್ದರಿಂದ ಆಕೆಯೇ ಬಲಿಪಶುವಾಗುತ್ತಾಳೆ.

ಹೆಣ್ಣು ಯಾವುದೇ ರೀತಿಯಿಂದ ಗಂಡಿಗೆ ಏನೇನೂ ಕಡಿಮೆ ಇಲ್ಲದಂತೆ ದುಡಿತದಲ್ಲಿ ದೈಹಿಕ ಶ್ರಮದ ಬೆವರೂ ಬಸಿದರೂ, ಮನೆಯೊಳಗಿನ ಸಾಂಸಾರಿಕ ಸುಖದ ಕನಿಷ್ಟ ಪಾಲ್ಕಿನಂತೆಯೇ ಆಕೆಗೆ ಹೊರಗಿನ ದುಡಿತದ ಪ್ರತಿಫಲದಲ್ಲೂ ಎರಡನೇ ದರ್ಜೆಯ ನೀತಿ.

ಎಂತಹ ಮಾನದಂಡದಲ್ಲೂ ಪ್ರಾಮಾಣಿಕ ಸತ್ಯ ಮುಖಕೆ ಬಡಿಯುವಂತೆ ಕಾಣುತ್ತಿದ್ದರೂ ಹೆಣ್ಣಿನ ಪರವಾದ ವಸ್ತು ಸ್ಥಿತಿ ಗಂಭೀರ ರೀತಿಯಲ್ಲಿ ಪರಿಗಣನೆಯಾಗುತ್ತಿಲ್ಲ. ಒಂದು ಹಳ್ಳಿಯ ಸ್ಥೂಲ ಚಿತ್ರ ಗಮನಿಸಿದಲ್ಲಿ ಅತ್ಯಂತ ವಾಸ್ತವ ನೋಟ ಎಂತಹವರಿಗೂ ಅರ್ಥವಾಗುವಂತಾದ್ದು.

18 ನೇ ಪುಟ ನೋಡಿ

# ಆರೋಗ್ಯ

## ದುಡಿಯುವ ಮಹಿಳೆಯರ ಆರೋಗ್ಯ ಸಮಸ್ಯೆಗಳು



ಅರಳಿದ ಕೆಂಪನೆಯ ಗುಲ್ ಮೋಹರ್ ಹೂಗಳು ಮೇ ತಿಂಗಳನ್ನು ನೆನಪಿಸುತ್ತಿದ್ದಂತೆಯೇ ಜೊತೆ ಜೊತೆಗೆ ಮಾರ್ಕ್ಸ್, ಲೆನಿನ್ ಕಾರ್ಮಿಕ ದಿನಾಚರಣೆ .... ಎಲ್ಲವು ಜ್ಞಾಪಕಕ್ಕೆ ಬರುತ್ತದೆ. ಕಾರ್ಖಾನೆಗಳಲ್ಲಿ ದುಡಿಯುವವರಷ್ಟೇ ಶ್ರಮಿಕರಲ್ಲ, ಶ್ರಮವನ್ನು ಮಾರಿಕೊಳ್ಳುವ ಪ್ರತಿಯೊಬ್ಬರು ಶ್ರಮಿಕರೆ. ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ಕಾರ್ಮಿಕ ಚಳುವಳಿಯಲ್ಲಿ ಭಾಗವಹಿಸಿದಾಗಲಷ್ಟೆ, ಚಳುವಳಿ ಯಶಸ್ವಿಯಾಗಲು ಸಾಧ್ಯ. ಮಹಿಳೆಯರೂ ಕಾರ್ಮಿಕರೆಂದಾದ ಮೇಲೆ ಅವರಿಗೆ ಸಂಬಂಧಪಟ್ಟ ವಿಶಿಷ್ಟ ಹಾಗೂ ಸೂಕ್ಷ್ಮ ಸಮಸ್ಯೆಗಳಿಗೆ ಗಮನ ಕೊಡಲೇ ಬೇಕು. ಹಾಗಾದಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬಹುದು. ಆಗಲೆ ಚಳುವಳಿ ಸಂಪೂರ್ಣ ಎನಿಸಿಕೊಳ್ಳುವುದು ಹಾಗು ಅರ್ಥಪೂರ್ಣವೆನಿಸಿಕೊಳ್ಳುವುದು.

ಸಂಘಟಿತ ಕ್ಷೇತ್ರದಲ್ಲಾಗಲಿ, ಅಸಂಘಟಿತ ಕ್ಷೇತ್ರದಲ್ಲಾಗಲಿ, ಮನೆಯಲ್ಲಾಗಲಿ ದುಡಿಯುವ ಮಹಿಳೆಯರೆಲ್ಲ ಕಾರ್ಮಿಕರೆ. ಹೆಚ್ಚು ಶೋಷಣೆಗೆ ಒಳಪಟ್ಟಿರುವವರು ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಮಹಿಳೆಯರು. ಅಸಂಘಟಿತ ಕ್ಷೇತ್ರದಲ್ಲಿ ಮಹಿಳೆಯರು ನಾನಾ ರೀತಿಯ ಕೆಲಸಗಳನ್ನು ಮಾಡುತ್ತಾರೆ. ಹೆಚ್ಚಿನ ಸಮಸ್ಯೆಗಳನ್ನು ಅನ್ಯಾಯಗಳನ್ನು ಎದುರಿಸುವವಳು ಅವಳೇ. ಇವುಗಳ ವಿರುದ್ಧ ಸಂಘಟಿತ ಹೋರಾಟ ನಡೆಯಬೇಕಾದರೆ ಅವಳ ಸಮಸ್ಯೆಗಳನ್ನು ಕುರಿತು ಅಧ್ಯಯನದ ಅವಶ್ಯಕತೆಯಿದೆ. ಮುಖ್ಯವಾಗಿ ಆಕೆ ಎದುರಿಸುವ ಸಮಸ್ಯೆ ಎಂದರೆ ಆರೋಗ್ಯಕ್ಕೆ ಸಂಬಂಧಪಟ್ಟದ್ದು. ಈ ವಿಷಯವಾಗಿ ನಡೆದಿರುವಂತಹ ಸಂಶೋಧನೆಗಳು ತೀರಾ ಕಡಿಮೆ. ನಡೆದಂತಹ ಸಂಶೋಧನೆಗಳು ಅವಳ ನಾನಾ ಸಮಸ್ಯೆಗಳನ್ನು, ಅವುಗಳ ಸಂಕೀರ್ಣತೆಯನ್ನು ತಿಳಿಸುತ್ತವೆ.

ವ್ಯವಸ್ಥಾನುಸಾರವಲ್ಲದ ಕ್ಷೇತ್ರಗಳಲ್ಲಿ ಮಹಿಳೆಯರು ನಾನಾ ರೀತಿಯ ಕೆಲಸಗಳನ್ನು ಮಾಡುತ್ತಾರೆ. ಹೆರುವುದು, ಮಕ್ಕಳನ್ನು ಸಾಕುವುದು, ಸೌದೆ ತರುವುದು, ಮೇವು ಸಂಗ್ರಹಿಸುವುದು, ನೀರು ತರುವುದು ಅಲ್ಲದೆ ದುಡಿದು ಸಂಪಾದಿಸುವ ಕೆಲಸವನ್ನೂ ಮಾಡುತ್ತಾರೆ. ಈ ಕಾರಣಕ್ಕಾಗಿ ಆಕೆ ನಾನಾ ರೀತಿಯ ಸಮಸ್ಯೆಗಳನ್ನು ಎದುರಿಸಬೇಕು - ಆರೋಗ್ಯದ ಸಮಸ್ಯೆ ತೀರಾ ಮುಖ್ಯವಾದುದು. ಬಡತನದಿಂದಾಗಿ ಅಪೌಷ್ಟಿಕ ಆಹಾರ ಸೇವನೆ, ರಕ್ತಹೀನತೆ, ಪದೇಪದೆ ಗರ್ಭಧರಿಸುವುದು, ಪ್ರೋಟೀನ್ ವಿಟಮಿನ್‌ಗಳ ತೀವ್ರಕೊರತೆ, ಗರ್ಭನಿಯಂತ್ರಣದ ಹೊಣೆ, ಲೈಂಗಿಕ ಅತ್ಯಾಚಾರ, ಮಾನಸಿಕ ಜಂಜಾಟ ಹೀಗೆ ಸಮಸ್ಯೆಗಳು ಬೆಳೆಯುತ್ತಲೆ ಹೋಗುತ್ತವೆ.

ಕೆಲವು ಗುರುತಿಸಲ್ಪಟ್ಟಿರುವ ತೊಂದರೆಗಳೆಂದರೆ

ಕೆಲಸ ಮಾಡುವಾಗ ಕುಳಿತುಕೊಳ್ಳುವ ಭಂಗಿ:
ಒಂದೇ ಭಂಗಿಯಲ್ಲಿ ಗಂಟೆಗಟ್ಟಲೆ ಕುಳಿತುಕೊಳ್ಳುವುದರಿಂದ ಬೆನ್ನುನೋವು, ಭುಜ, ಸೊಂಟ, ಕೀಲುಗಳ ಸೆಳೆತಗಳಂತಹ ತೊಂದರೆಗಳನ್ನನುಭವಿಸುತ್ತಾಳೆ. ಬೀಡಿ ಕಟ್ಟುವ, ಹೆಣಿಗೆ, ಕಸೂತಿ, ಎಂಬ್ರಾಯಿಡರಿ, ನೇಯ್ಗೆ, ಕಾರ್ಪೆಟ್ ಮಾಡುವ ಕೆಲಸಗಾರರಲ್ಲಿ ಇದು ಸಾಮಾನ್ಯ,

ಅಪಾಯಕಾರಿ ವಸ್ತುಗಳಿಂದ ತೊಂದರೆಗಳು:
ಬಟ್ಟೆಗಳಿಗೆ ಬಣ್ಣ ಹಾಕುವುದರಿಂದ, ಕಾರ್ಬನ್ ಮಾನಾಕ್ಸೈಡ್‌ನಂತಹ ಅನಿಲಗಳ ಸೇವನೆಯಿಂದ, ರಾಸಾಯ

ನಿಕಗಳ ಹೊಗೆ (ಇಲೆಕ್ಟ್ರಾನಿಕ್ ಕಾರ್ಖಾನೆಗಳಲ್ಲಿ)ಯಿಂದ ಹೊಗೆಸೊಪ್ಪಿನ ಧೂಳಿನಿಂದ ಮಹಿಳೆಯರು ಅನೇಕ ರೀತಿಯ ಆರೋಗ್ಯದ ಸಮಸ್ಯೆಗಳನ್ನು ಎದುರಿಸುತ್ತಾರೆ. ಮಧ್ಯಪ್ರದೇಶದಲ್ಲಿ ಕೃಷಿಯಲ್ಲಿ ನಿರತರಾದ ಮಹಿಳೆಯರು (ಶೇ. ೬೩ರಷ್ಟು) ಬೀಜದೊಂದಿಗೆ ಬೆರೆಸಿದ ಫರ್ಟಿಲೈಸರ್ ಪುಡಿಯಿಂದಾಗಿ ಉಂಗೈ ಉರಿ ಉಸಿರಾಟದ ತೊಂದರೆ, ಅತಿ ಬೆವರಿಕೆಯತಹ ತೊಂದರೆಗಳನ್ನು ಅನುಭವಿಸಿದರು ಎಂದು ಹೆಲ್ತ್ ಟಾಸ್ಕ್‌ಫೋರ್ಸ್‌ನವರು ನಡೆಸಿದ ಅಧ್ಯಯನದಿಂದ ತಿಳಿದು ಬಂದಿದೆ. ಈ ತೊಂದರೆಗಳು ನಿಧಾನವಾಗಿ ಅವರನ್ನು ಸಾಯಿಸುತ್ತಾ ಹೋಗುತ್ತವೆ.

ಕೆಲಸ ಮಾಡುವ ವಾತಾವರಣದಿಂದುಟಾಗುವ ತೊಂದರೆಗಳು: ಗಾಳಿ, ಬೆಳಕು, ನೀರು, ವಿಶಾಲ ಜಾಗ ಹಾಗೂ ಶೌಚಾಲಯದ ಕೊರತೆಗಳು ಅನೇಕ ಕಾಯಿಲೆಗಳನ್ನುಂಟು ಮಾಡುತ್ತವೆ. ಗಂಟೆಗಟ್ಟಲೆ ಮಬ್ಬು ಬೆಳಕಿನಲ್ಲಿ ಎಂಬ್ರಾಯಿಡರಿ, ಹೆಣಿಗೆ ಮುಂತಾದ ಅತಿ ಸೂಕ್ಷ್ಮ ಕೆಲಸಗಳನ್ನು ಮಾಡುವ ಮಹಿಳೆಯರು ತಲೆನೋವು, ದೃಷ್ಟಿದೋಷಗಳ ತೊಂದರೆಗಳಿಗೊಳಪಡುತ್ತಾರೆ. ಸಣ್ಣ ಕೈಗಾರಿಕೆಗಳಲ್ಲಿ ಅತಿ ಉಷ್ಣತೆಯ ಕೋಣೆಗಳಲ್ಲಿ (ಗಾಜಿನ ಕಾರ್ಖಾನೆಗಳಲ್ಲಿ) ಕೆಲಸ ಮಾಡುವ ಮಹಿಳೆಯರು ಅತಿ ಉಷ್ಣತೆಯಿಂದಾಗಿ ಪ್ರಜ್ಞೆ ತಪ್ಪುತ್ತಾರೆ. ಶೌಚಾಲಯವಿಲ್ಲದಿರುವುದು ಮಲಬದ್ಧತೆಗೆ ಕಾರಣವಾಗುತ್ತದೆ. ಶೌಚಾಲಯದ ಕೊರತೆಯಿಂದಾಗಿ ಹಗಲಿನಲ್ಲಿ ಕಮ್ಮಿ ನೀರು ಹಾಗು ಊಟ ಸೇವಿಸುವುದರಿಂದ ಮಹಿಳೆಯರು ಇನ್ನು ಹೆಚ್ಚಿನ ಅನಾರೋಗ್ಯಕ್ಕೆ ಗುರಿಯಾಗುತ್ತಾರೆ. ಗಣಿ ಹಾಗು ವ್ಯವಸಾಯದಲ್ಲಿ ಹಗಲಿನಿಂದ ಸಂಜೆಯವರೆಗೆ ಬಯಲಿನಲ್ಲಿ ಕೆಲಸ ಮಾಡುವ ಮಹಿಳೆಯರು ವಿಪರೀತ ಬೆವರುವುದರಿಂದ ದೇಹದ ಅಮೂಲ್ಯವಾದ ನೀರು, ಹಾಗೂ ಲವಣಗಳನ್ನು ಕಳೆದುಕೊಳ್ಳುತ್ತಾರೆ.

ಸೀರೆಗಳಿಗೆ ಬಣ್ಣ ಹಾಕುವ, ಹೊಲೆಯುವ ಕೆಲಸದಲ್ಲಿ ನಿರತರಾದ ಮಹಿಳೆಯರು ವಿಪರೀತ ಕೈನೋವು ಹಾಗೂ ಬೆರಳುಗಳ ಚರ್ಮಸೀಳುವಿಕೆಯಿಂದ ನರಳುತ್ತಾರೆ.

ಭಾರ ಎತ್ತುವ ಕೆಲಸಗಳು: ಕಟ್ಟಡದ ಕೆಲಸ ಹಾಗೂ ಇಟ್ಟಿಗೆ ಕೆಲಸಗಾರರು ಮುಟ್ಟಿಗೆ ಸಂಬಂಧ ಪಟ್ಟ ತೊಂದರೆಗಳು, ಗರ್ಭಕೋಶ ಜಾರುವಿಕೆ, ಗರ್ಭಪಾತ, ಬೆನ್ನಿನ ನೋವು ಮುಂತಾದ ಖಾಯಿಲೆಗಳಿಂದ ನರಳುತ್ತಾರೆ ಈ ರೀತಿಯ ಕೆಲಸಗಳಲ್ಲಿ ಅವರಿಗೆ ಅಥವಾ ಅವರ ಮಕ್ಕಳಿಗೆ ಸಂಭವಿಸುವ ಗಾಯ ಅಥವಾ ಅಪಘಾತ ತೀರಾ ಸಾಮಾನ್ಯ.

ಹೆಚ್ಚು ಗಂಟೆಗಳ ಕೆಲಸ: ಬೀಡಿ ಕಟ್ಟುವ ಊದುಬತ್ತಿ ಹೊಸೆಯುವ, ಹಪ್ಪಳ ಮಾಡುವ, ಕಾಗದದ ಚೀಲ ಮಾಡುವ ಕೆಲಸಗಳನ್ನು ಮಹಿಳೆಯರು ಬೆಳಗಿನಿಂದ ಸಂಜೆಯುವರೆಗೂ ಮಾಡುತ್ತಾರೆ. ವಿಶ್ರಾಂತಿಯಿಲ್ಲದ ಹೆಚ್ಚು ಗಂಟೆಗಳ ದುಡಿತ ಆರೋಗ್ಯವನ್ನು ಹದಗೆಡಿಸಿ ಸಾವಿಗೂ ಕಾರಣವಾಗುತ್ತದೆ. ರಾಸಾಯನಿಕ ಹೊಗೆ, ಅನಿಲ, ಧೂಳುಗಳಿಂದಾಗಿ ಗಣಿಗಳಲ್ಲಿ, ಬಳಪದ ಕಾರ್ಖಾನೆಗಲ್ಲಿ, ಎಲೆಕ್ಟ್ರಾನಿಕ್ಸ್ ಕಾರ್ಖಾನೆಗಳಲ್ಲಿ ದುಡಿಯುವ ಮಹಿಳೆಯರು ಅನೇಕ ಕಾಯಿಲೆಗಳಿಗೊಳಪಡುತ್ತಾರೆ.

ಪುನಃ ಪುನಃ ಒಂದೇ ರೀತಿಯ ಚಲನೆಯುಳ್ಳ ಕೆಲಸಗಳಿಂದಾಗುವ ತೊಂದರೆಗಳು: ಎಲೆಕ್ಟ್ರಾನಿಕ್ಸ್ ಕಾರ್ಖಾಗಳಲ್ಲಿ ಸರ್ಕ್ಯೂಟ್ ಜೋಡಣೆಯನ್ನು ದಿನವೂ ಮಾಡುವ ಮಹಿಳೆಯರು ಸುಸ್ತು, ಮಾನಸಿಕ ಜಡತ್ವದಿಂದ ನರಳುತ್ತಾರೆ. ವಿಪರೀತ ಸುಸ್ತಾಗುವಿಕೆಗೆ ಅಪಘಾತಕ್ಕೆ ಕಾರಣವಾಗುತ್ತದೆ.

ಯಾಂತ್ರೀಕರಣ ಹಾಗು ತಾಂತ್ರಿಕತೆಯಿಂದುಂಟಾಗುವ ತೊಂದರೆಗಳು: ಮುಂದುವರೆದ ತಾಂತ್ರಿಕತೆಯು ಲಾಭ ಹೆಚ್ಚಿಸುವ ಸಾಧನಗಳಾಗುತ್ತವೆ. ಇದರಿಂದ ಹೆಚ್ಚು ತೊಂದರೆಗೊಳ ಪಡುವವರು ಮಹಿಳಾ ಕಾರ್ಮಿಕರು. ಬೀಡಿಕಟ್ಟುವದಕ್ಕೆ, ಗಣಿಗಳಲ್ಲಿ, ನೇಯ್ಗೆಯಲ್ಲಿ ಯಂತ್ರಗಳನ್ನು ಅಳವಡಿಸುವುದರಿಂದ ಅನೇಕ ಮಹಿಳೆಯರು ಕೆಲಸ ಕಳೆದುಕೊಳ್ಳ ಬೇಕಾಗುತ್ತದೆ. ಯಾಂತ್ರೀಕರಣಕ್ಕೆ ಬೇಕಾದ ತರಬೇತಿಯಾಗಲಿ, ಪರ್ಯಾಯವಾಗಿ ಮತ್ತೊಂದು ಕೆಲಸವಾಗಲಿ ಇಲ್ಲದೆ ಹೊಟ್ಟೆಪಾಡಿಗಾಗಿ ದುಡಿಯುತ್ತಿದ್ದ ಮಹಿಳೆಯರು ಕೆಲಸವನ್ನು ಕಳೆದುಕೊಂಡು ಇನ್ನು ಹೆಚ್ಚು ಕಷ್ಟಕರವಾದ ದುಡಿಮೆಗೆ ಮೊರೆ ಹೋಗಬೇಕಾಗುತ್ತದೆ. ಹೆಚ್ಚು ಶ್ರಮದಾಯಕವಾದ ಕೆಲಸದಲ್ಲಿ ತೊಡಗುವದರಿಂದ ಮಹಿಳೆಯರು ಅಪೌಷ್ಟಿಕತೆಯಿಂದ ನರಳುತ್ತಾರೆ.

ಶ್ರಮದಾಯಕವಾದ, ತಾಂತ್ರಿಕತೆಯಿಂದ ದೂರವಾಗಿ ಉಳಿದ ಕೆಲಸಗಳಾದ ಕಳೆ ಕೀಳುವುದು, ಸುಗ್ಗಿ ಮುಂತಾದ ಕೆಲಸಗಳನ್ನು ಮಹಿಳೆಯರೇ ಮಾಡುತ್ತಾರೆ. ಉತ್ಪಾದನಾ ವ್ಯವಸ್ಥೆ ಹೆಚ್ಚು ಯಾಂತ್ರೀಕರಣಗೊಂಡಂತೆ ಮಹಿಳೆಯರು ಹೆಚ್ಚಿನ ತೊಂದರೆಗೊಳ ಪಟ್ಟ

ದ್ದಾರೆ. ಬಳಪದ ಫ್ಯಾಕ್ಟರಿಯಲ್ಲಿ ಯಂತ್ರಗಳ ಬಳಕೆಯಿಂದುಂಟಾಗುವ ಧೂಳಿನಿಂದ ಅನೇಕ ಮಹಿಳೆಯರು ಶ್ವಾಸಕೋಶದ ಕಾಯಿಲೆಯಿಂದ ನರಳುತ್ತಾರೆ.

ಮಾನಸಿಕ ಆರೋಗ್ಯಕ್ಕೆ ಸಂಬಂಧ ಪಟ್ಟ ತೊಂದರೆಗಳು: ಮಹಿಳೆಯರು ಮಾಡುವ ಕೆಲಸಗಳು ಅಸಂಘಟಿತ ಹಾಗು ವ್ಯವಸ್ಥಾನುಸಾರವಲ್ಲದುದರಿಂದ ಅನೇಕ ರೀತಿಯ ಶೋಷಣೆಗೆ ಒಳಪಟ್ಟದ್ದಾರೆ. ಅವಳ ಮೇಲೆ ನಡೆಯುವ ಲೈಂಗಿಕ ದಬ್ಬಾಳಿಕೆಯು ಅವಳನ್ನು ಅತ್ಯಾಚಾರಕ್ಕೆ, ವೇಶ್ಯಾವೃತ್ತಿಗೆ ಗುರಿ ಮಾಡುತ್ತದೆ. ಮನೆ ಹಾಗು ಕೆಲಸದಲ್ಲಿರುವ ಲಿಂಗಭೇದ ನೀತಿಗಳಿಂದಾಗಿ ಆಕೆ ಅಸಹಾಯಕಳಾಗಿದ್ದಾಳೆ ಹಾಗು ಆಕೆಯ ಸ್ವಾತಂತ್ರ್ಯಕ್ಕೆ ಹಾನಿಯುಂಟಾಗಿದೆ. ಈ ರೀತಿಯ ನಿರಂತರವಾದ ದುಗುಡ, ಆತಂಕಗಳು ಮಾನಸಿಕ ಅಸ್ವಾಸ್ಥತೆಗೆ ಕಾರಣವಾಗಿದೆ. ಪುರುಷ ಕಾರ್ಮಿಕರು ಕಾರ್ಖಾನೆಗಳಲ್ಲಷ್ಟೆ ಶೋಷಣೆಗೆ ಗುರಿಯಾದರೆ ಮಹಿಳಾ ಕಾರ್ಮಿಕರು ಕೆಲಸ ಮಾಡುವೆಡೆಯಲ್ಲಿ ಅಲ್ಲದೆ ಮನೆಯಲ್ಲೂ, ಸಮಾಜದಲ್ಲೂ ದಬ್ಬಾಳಿಕೆಗೆ ಗುರಿಯಾಗುತ್ತಾರೆ.

ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಎಲ್ಲ ಮಹಿಳೆಯರು ಲೈಂಗಿಕ ದಬ್ಬಾಳಿಕೆಗೆ ಗುರಿಯಾಗಿದ್ದಾರೆ. ದಾದಿಯರು, ಮಹಿಳಾ ವೈದ್ಯಾಧಿಕಾರಿಗಳಾದವರು ವೈದ್ಯರಿಂದ, ಮನೆಗೆಲಸ ಮಾಡುವವರು ಮನೆ ಯಜಮಾನರಿಂದ, ವೇಶ್ಯೆಯರು ಪೊಲೀಸರು, ಗಿರಾಕಿ, ರೌಡಿಗಳಿಂದ, ಫ್ಯಾಕ್ಟರಿಯಲ್ಲಿ ಕೆಲಸ ಮಾಡುವವರು ಸಹ ಕೆಲಸಗಾರರಿಂದ ಲೈಂಗಿಕ ದಬ್ಬಾಳಿಕೆಗೆ ಬಲಿಯಾಗಿರುವವರು. ಈ ಲೈಂಗಿಕ ದಬ್ಬಾಳಿಕೆಯು ಮಹಿಳೆಯರ ಮಾನಸಿಕ ಮತ್ತು ದೈಹಿಕ ಅಸ್ವಾಸ್ಥತೆಗೆ ಕಾರಣವಾಗಿದೆ.

ಕಾರ್ಮಿಕ ಸಂಘಟನೆ ಈ ರೀತಿಯ ಮಹಿಳಾ ಸಮಸ್ಯೆಗೆ ಸೂಕ್ಷ್ಮವಾಗಿ ಸ್ಪಂದಿಸಿದರೆ ಮಾತ್ರ "ವಿಶ್ವದ ಕಾರ್ಮಿಕರ ಒಂದಾಗಿ" ಎನ್ನುವ ಘೋಷಣೆ ಹೆಚ್ಚಿನ ಅರ್ಥ, ಮಹತ್ವ ಹೊಂದುವುದು.

ಟಾಸ್ಕ್‌ಫೋರ್ಸ್ ಆನ್ ಹೆಲ್ತ್‌ನ ವರದಿ.

**ಸರಸ್ವತಿ ದು.**

15ನೇ ಪುಟದಿಂದ

ಪ್ರತಿಹಳ್ಳಿ ಕುಟುಂಬದ ಓರೆ ನೇರಗಳ ಅಡಿಪಾಯದ ಹಿಂದೆ ಮಹಿಳೆಯ ಶ್ರಮ ಮತ್ತು ಕಾಳಜಿಗಳೇ ನೆಲಗಟ್ಟಾಗಿರುವುದು ಅವರ ಮೂಲಶಕ್ತಿ ಹೆಣ್ಣೆ ಎಂಬುದರಲ್ಲಿ ಪ್ರತಿಮಾತೆ ಇರಲಾರದು. ಊರೂರ ಸುತ್ತ ದುಡಿಮೆ ಶ್ರಮಗಳ ದ್ಯೋತಕವಾದ ಜೀವನಾಧಾರವಾದ ಬೆಳೆಯ ನೆಲೆ ಹಸಿರು ಕಟ್ಟಿ ಹೊನ್ನಾಗುವ ಬಿತ್ತನೆಯ ಒಹುಪಾಲು ಶ್ರಮ, ಬೆವರು ಹೆಣ್ಣಿನದೇ ಆಗಿದ್ದರೂ, ಆ ಬೆಳೆಗೆ, ಆ ನೆಲಕ್ಕೆ, ಅವುಗಳ ಸಂಪೂರ್ಣ ಸಾರ್ವಭೌಮತ್ವ ಗಂಡುಗಳ ಸ್ವಾಮಿತ್ವ ಮಾತ್ರ ಎಂಬುದು ಅದೆಷ್ಟು ವಿಪರ್ಯಾಸವಲ್ಲವೆ?

**ಉತ್ತನೂರು ರಾಜಮ್ಮ ವಿ. ಶೆಟ್ಟಿ**

ಚಿಂತಾಮಣಿ.

---

## "ಸವಾಲ್"

ನನ್ನ ಬಗ್ಗೆ ನಿನ್ನದು ಗಾಢ ಪ್ರೀತಿ,
ಹಾಗೆಂದುಕೊಂಡಿದ್ದು ನನ್ನ ಭ್ರಾಂತಿ.
ಸಮಾಜ ನಿಯಮ ಅನುಸರಿಸಿಕೊಂಡಿದ್ದೆ,
ನಿನ್ನ ಪ್ರೀತಿ.
ಇವನ್ನು ಎದುರಿಸುವಷ್ಟು ಇಲ್ಲ ನಿನ್ನಲ್ಲಿ —
ಛಾತಿ.
ಮ್ಯಾಡ್ ಫಾರ್ ಈಚ್ ಅದರ್ ಎಂದು ಮರುಕಳಿಸಿದ್ದೆ
ತೀರ ಹತ್ತಿರದಿಂದ.
ನಾನೊಬ್ಬ ಬಾಲವಿಧವೆ ಎಂದಾಕ್ಷಣ ಅದೇಕೆ ಅಷ್ಟು
ದೂರ ಸರಿವೆ ನನ್ನಿಂದ.
ನಿನ್ನದೆಂಥ ವಿಚಿತ್ರ ಪ್ರೀತಿ ನಲ್ಲ.
ತುಂಬಿದೆ ಅವರಲ್ಲಿ ಸೀಮೆ ಎಣ್ಣೆ ಬೆಲ್ಲ.
ನೀ ದೂರ ಹೋದರೆ ಬದುಕಲಾರೆನೆ
ನಾನು
ನನ್ನ ಬದುಕನ್ನೆ ಕಂಡು ಕರುಬಬೇಕು
ನೀನು

ರಾಧಾ
ಗ. ಗುಡಿ.

---

# ನೆನಪಿದೆಯೆ ?

ನೆನಪಿದೆಯೆ ?
ಸವೆದ ಬೂಟುಗಳ
ಕಪ್ಪು ಮೈಬಣ್ಣದ
ಕಿಶೋರಿ ನಾನು

ಹುಳುಕು ಹಲ್ಲುಗಳ
ಹುಡುಗಿ ನಾನು

ಕಪ್ಪು ವರ್ಣದ
ಕೊಳೆತ ದಂತದ ಹುಡುಗಿ
ಗಾಯಗೊಂಡ ಕಣ್ಣಿನವಳು
ಕರಗಿಹೋದ ಕಿವಿಯವಳು.

ಅವರ ಹಸುಳೆಗಳನ್ನೆತ್ತಿಕೊಳ್ಳುವ
ಹುಡುಗಿ ನಾನು

ಅವರ ಅಡಿಗೆ ಮಾಡುವವಳು
ಅವರ ಅಂಗಳ ಗುಡಿಸುವವಳು
ಅವರ ಬಟ್ಟೆ ತೊಳೆಯುವವಳು

ಕಪ್ಪಾದ ಕೊಳೆಯುತ್ತಿರುವ
ಗಾಯಗೊಂಡವಳು, ಗಾಯಗೊಂಡವಳು

ಮಾನವ ಜನಾಂಗಕ್ಕೆ
ಭರವಸೆ ಮಾತ್ರ
ನೀಡುವವಳು ನಾನು.

ದಿವ್ಯವಾದ ಗಾಢ
ಕಪ್ಪು ಮೈ ಬಣ್ಣದ
ಹೆಣ್ಣು ನಾನು.

ರಿಪೇರಿಯಾದ ದಂತದ
ಹೆಣ್ಣು ನಾನು.

ನೋಯುತ್ತಿರುವ ಕಣ್ಣಿನ
ಕೇಳುತ್ತಿರುವ ಕಿವಿಯ
ಹೆಣ್ಣು ನಾನು.

ನಾನೊಬ್ಬಳು ಹೆಣ್ಣು ; ಕಪ್ಪಾದವಳು,
ನೇರ್ಪಾದವಳು, ಗುಣವಾದವಳು
ನಿಮ್ಮ ಮಾತುಗಳನ್ನು ಆಲಿಸುವವಳು.

ಮಾನವ ಜನಾಂಗಕ್ಕೆ
ಭರವಸೆ ಮಾತ್ರ
ನೀಡುವವಳು ನಾನು.

ಅವಳಿ ಬೇರುಗಳಿರುವ
ಎರಡು ಹೂಗಳ
ನೀಡುವ
ಹೆಣ್ಣು ನಾನು.

ನ್ಯಾಯ ಮತ್ತು ಭರವಸೆ
ಆರಂಭಿಸೋಣ ನಾವು.

ಮೂಲ : ಅಲೈಸ್ ವಾಕರ್
ಕನ್ನಡಕ್ಕೆ : ಸಿ. ಜಿ. ಮಂಜುಳಾ.

# ನನ್ನ ಜೀವನದಲ್ಲಿ ನಾನು ಬರೆದದ್ದೆಲ್ಲ ಸ್ತ್ರೀಯರನ್ನು ಕುರಿತಾಗಿಯೇ

– ಎಡ್ವರ್ಡ್ ರಾಡ್‌ಜಿನ್‌ಸ್ಕಿ.

ಕೆಲವರು ಎಡ್ವರ್ಡ್ ರ್ಯಾಡ್‌ಜಿನ್‌ಸ್ಕಿ ಎಂಬ ಹೆಸರಿನ ಇಬ್ಬರೂ ನಾಟಕಕಾರರೂ ಹೆಸರಿನಂತೆಯೇ ಒಂದೇ ರೀತಿಯ ವ್ಯಕ್ತಿತ್ವವುಳ್ಳವರು ಎಂದು ತಪ್ಪುತಿಳಿದಿರುತ್ತಾರೆ. ಆದರೆ ಅವರಲ್ಲೊಬ್ಬರ ನಾಟಕಗಳು ಚಾರಿತ್ರಿಕ ವ್ಯಕ್ತಿಗಳಾದ ಸಾಕ್ರೆಟಿಸ್ ಲುನಿನ್, ದಿ ಥಿಯೇಟರ್ ಡ್ಯುರಿಂಗ್ ದಿ ಟೈಮ್ಸ್ ಆಫ್ ನೀರೋ ಅಂಡ್ ಸೆನೆಕಾರವರನ್ನು ಕುರಿತಂತೆ. ಮತ್ತೊಬ್ಬ ನಾಟಕಕಾರನ ಕೃತಿಗಳು ಸ್ತ್ರೀ ಪ್ರಧಾನವಾದದ್ದು. 104 ಪೇಜಸ್ ಎಬೌಟ್ ಲವ್, ಎ ಚಾರ್ಮಿಂಗ್ ವುಮನ್ ವಿತ್ ಎ ಫ್ಲವರ್ ಅಂಡ್ ವಿಂಡೋಸ್ ಫೇಸಿಂಗ್ ನಾರ್ತ್, ಸೀನ್ಸ್ ಫ್ರಂ ಸ್ಪೋರ್ಟಿಂಗ್ ಲೈಫ್ 1981, ಅನ್ ಏಜಿಂಗ್ ಆಕ್ಟ್ರೆಸ್ ಇನ್ ದಿ ರೋಲ್ ಆಫ್ ದೋಸ್ತೋವಸ್ಕಿಸ್ ವೈಫ್, ಐ ಆಮ್ ಸ್ಟಾಂಡಿಂಗ್ ಇನ್ ಫ್ರಂಟ್ ಆಫ್ ದಿ ರೆಸ್ಟೋರಾಂಟ್....- ಇತ್ಯಾದಿ.

ಡಾ॥ ಎಂ. ಕಿಪ್ (ಕಾನ್ಸಾಸ್ ವಿಶ್ವವಿದ್ಯಾಲಯ ಯು. ಎಸ್. ಎ.) ತನ್ನ ಪ್ರಬಂಧದಲ್ಲಿ ಪ್ರತಿಪಾದಿಸುವಂತೆ, ಇಬ್ಬರು ನಾಟಕಕಾರರು ಒಪ್ಪಿಕೊಳ್ಳಲೂ ಆಗದಂತಹ ಭಿನ್ನ ಕ್ಷೇತ್ರಗಳಲ್ಲಿದ್ದಾರೆ. ಸ್ತ್ರೀ ಪ್ರಧಾನ ನಾಟಕಗಳನ್ನು ರಚಿಸಿದ, ವಿಭಿನ್ನ ದೃಷ್ಟಿಕೋನದ ಎಡ್ವರ್ಡ್ ರ್ಯಾಡ್‌ಜಿನ್‌ಸ್ಕಿ ಏನು ಹೇಳಬಹುದು?

ನಾನೇನಾದರೂ ಹೆಣ್ಣಾಗಿ ಹುಟ್ಟಿದ್ದಿದ್ದರೆ, ಖಂಡಿತವಾಗಿಯೂ, "ಗಂಡಾಗಿ ಹುಟ್ಟಬೇಕಿತ್ತು" ಎಂದು ಬಯಸುತ್ತಿದ್ದೆ. ಪುರುಷರ ಜೀವನ ತುಂಬ ಸರಳ. ಅಪಾಯಕಾರಿಯಲ್ಲದ, ಹೆಚ್ಚಿನ ಅನುಕೂಲತೆಗಳಿಂದ ಕೂಡಿದೆ. ಗಂಡಸರ ಆತ್ಮಾಭಿಮಾನ ಯಾರಿಗೂ ಅಚ್ಚರಿಯೆನಿಸುವುದಿಲ್ಲ, ಅದೇ ಒಬ್ಬ ಮಹಿಳೆಯ ಆತ್ಮಾಭಿಮಾನ ಸಾಮಾನ್ಯವಾಗಿ ಪ್ರತಿಯೊಬ್ಬರ ತಿರಸ್ಕಾರಕ್ಕೂ, ಕೋಪಕ್ಕೂ ಗುರಿಯಾಗುತ್ತದೆ. ಹೀಗೆಯೇ ಹೆಂಗಸರಿಗೆ ನಿಷೇಧವೆನಿಸಿದ ಬಹಳಷ್ಟು ಗುಣಗಳು, ರೀತಿ ನೀತಿಗಳು ಗಂಡಸರಿಗೆ ಭೂಷಣಪ್ರಾಯವೆನಿಸಿವೆ.

ಸ್ತ್ರೀಯರ ಬಗ್ಗೆ ಬರೆಯುವುದು ಎಷ್ಟು ಕಷ್ಟವೆಂಬುದು ನಿಮಗೇ ತಿಳಿದಿದೆ. ಹೆಚ್ಚೇನಲ್ಲ ದೂರದ ಗ್ರಹಗಳಲ್ಲಿನ ಜೀವಿಗಳ ಬಗ್ಗೆ ಬರೆದಷ್ಟೇ ಕಷ್ಟ. ಸ್ತ್ರೀಯರು ಕಾಲ್ಪನಿಕ ಜೀವಿಗಳು. ಹೊಸ ಜೀವದ ಸೃಷ್ಟಿಗಾಗಿಯೇ ನಿಯಮಿತರಾಗಿದ್ದರಿಂದಲೇ ಮಹಿಳೆಯರು, ಗಲಿಬಿಲಿಯನ್ನು ಜೊತೆಗೆ ಮಿತಿಯಿಲ್ಲದಷ್ಟು ನೈಸರ್ಗಿಕ ಶಕ್ತಿ ಸಂಪನ್ನತೆಯನ್ನೂ ಹೊಂದಿದ್ದಾರೆ. ಈ ವಿಷಯದ ಬಗ್ಗೆ ಪ್ರಥಮ ಬಾರಿ ಬರೆಯಲು ಧೈರ್ಯ ಮಾಡಿದ್ದು ಯಾವಾಗ ಎಂದು ಈಗ ಹೇಳುವುದು ಕಷ್ಟ.

"೧೦೪ ಪೇಜಸ್ ಎಬೌಟ್ ಲವ್" ನಾಟಕವು ೩ನೆಯದಾದರೂ, ಸ್ತ್ರೀಯರ ಬಗ್ಗೆ ಬರೆದ ಪ್ರಥಮ ನಾಟಕವಾಗಿತು. ೬೦ರ ದಶಕದಲ್ಲಿ ಅದು ಬಹು ಜನಪ್ರಿಯವಾಗಿತ್ತು. ಲೆನಿನ್ ಕಮ್‌ಸೋಮಲ್ ಥಿಯೇಟರಿನಲ್ಲಿ ಪ್ರದರ್ಶಿತವಾಗುತ್ತಿದ್ದ ಈ ನಾಟಕದ ನಿರ್ಮಾಪಕ ಹಾಗೂ ನಿರ್ದೇಶಕ ಅನಾಟೋಲಿ ಎಫ್ರೋಸ್. ಈ ನಾಟಕವನ್ನು ಆಧರಿಸಿ ಚಲನಚಿತ್ರವನ್ನೂ ತೆರೆಗೆ ತರಲಾಯಿತು, ಗೀತ ರೂಪಕವಾಗಿಯೂ ಪ್ರದರ್ಶಿತವಾಯಿತು. ಇದರ ಜನಪ್ರಿಯತೆಯ ಕಾರಣ ನನಗೆ ತಿಳಿದಿತ್ತು.

ಅದೇ ಸಮಯದಲ್ಲಿ ಜನರ ಅಭಿರುಚಿ, ಆಸಕ್ತಿಗಳು ವಿಜ್ಞಾನದೆಡೆಗೆ ತಿರುಗಿತ್ತು. ಭೌತ ವಿಜ್ಞಾನಿಗಳು ಮತ್ತು ಕಾವ್ಯ ಜೀವಿಗಳ ನಡುವೆ ಬಿಸಿ ಬಿಸಿ ವಾಗ್ವಾದಗಳು ನಡೆಯುತ್ತಿದ್ದವು. ಇದರ ಫಲವಾಗಿ ರಂಗದ ಮೇಲೆ ಬರುವ ನಾಯಕ ಪ್ರತಿಮೆಗಳು ಹೊಸ ರೂಪ ಪಡೆದಿದ್ದವು. ಬೌದ್ಧಿಕತೆಗೆ ಪ್ರಾಧಾನ್ಯ ದೊರೆತು ಕಾವ್ಯಾತ್ಮಕ ಅಥವಾ ಭಾವನಾತ್ಮಕ ಅಂಶಗಳು ನಿಧಾನವಾಗಿ ನಿರ್ಗಮಿಸಿದವು. ಇಂತಹುದೇ ಒಂದು ಪ್ರಯೋಗದಲ್ಲಿ ನನ್ನ ನಾಟಕದಲ್ಲಿನ ನಾಯಕ

ಪ್ರೇಮ ಪರೀಕ್ಷೆಯಲ್ಲಿ ಸೋಲುತ್ತಾನೆ, ಇದರಲ್ಲಿ ಬರುವ ಹುಡುಗಿ ಅದಮ್ಯವಾಗಿ ಪ್ರೀತಿಸುವ ಆಕಾಂಕ್ಷೆ ಹೊಂದಿರುವವಳಾಗಿರುತ್ತಾಳೆ, ಇನ್ನೂ ತನ್ನ ಜೀವನ ಪಥವನ್ನು ಆಯ್ದುಕೊಳ್ಳಲು ಕವಲು ದಾರಿಯಲ್ಲಿ ನಿಂತಿರುತ್ತಾಳೆ. ಕೊನೆಯಲ್ಲಿ ಬೌದ್ಧಿಕ ಜೀವಿಯಾಗಿ ಅರಳಲಿಚ್ಛಿಸದೆ, ಉನ್ನತ ಮಟ್ಟದ ಭಾವನಾತ್ಮಕ ಜೀವನವನ್ನು ಆರಿಸಿಕೊಳ್ಳುತ್ತಾಳೆ.

ಪುರುಷರ ಟೀಕೆಯಿಂದ ನೊಂದಿರುವ ಹೆಂಗಸರೊಂದಿಗೆ ಅವರ ನೋವಿನಲ್ಲಿ ನಾನೂ ಭಾಗಿಯಾಗುತ್ತೇನೆ. ಸೋವಿಯತ್‌ನ ಹೆಂಗಸರು ಕಾಲ್ಪನಿಕ ಜೀವಿಗಳು ಅವರ ಜೀವನ ನಕಾರಾತ್ಮಕ ಪ್ರಪಂಚದಲ್ಲೇ, ಸದಾ ಹೊಸ ಹೊಸದನ್ನೇ ಬಯಸುವವರು ಆಡಂಬರಪ್ರಿಯೆಯರು. ಅವರ ಬಳಿಯಿರುವ ವಸ್ತುಗಳು ಎಷ್ಟೇ ಕೀಳು ದರ್ಜೆಯದಾಗಿದ್ದರು ಅಷ್ಟೂ ವೈಭವದಿಂದ ತಮ್ಮನ್ನು ತಾವು ಸಿಂಗರಿಸಿಕೊಳ್ಳುತ್ತಾರೆ,............ ಇತ್ಯಾದಿ.

ಹೀಗೆಯೇ ಎಷ್ಟು ರೀತಿಯಲ್ಲಿ ಸ್ತ್ರೀಯರಿಗೆ ಅಪಮಾನ ಮಾಡಿದರೂ ಅದನ್ನು ಲೆಕ್ಕಿಸದೆ, ಆಕೆ ಸಹಿಸಿಕೊಳ್ಳಬೇಕು. ಈ ರೀತಿಯ ಅಪಮಾನ ಆಕೆಗೆ ಪುರುಷರಿಂದಲೇ ಬರುವುದು. ಆಕೆ ಎಲ್ಲಿಯಾದರೂ ಉದ್ಯೋಗಕ್ಕಾಗಿ ಪ್ರಯತ್ನಿಸಿದಲ್ಲಿ, ಪುರುಷರಷ್ಟೇ ಅವಳಿಗೂ ಅರ್ಹತೆಗಳಿದ್ದರೂ ಮೊದಲ ಪ್ರಾಶಸ್ತ್ಯ ಗಂಡಸರಿಗೇ. ನಮ್ಮಲ್ಲಿ ಎಷ್ಟು ಜನ ಮಹಿಳಾ ಸಚಿವೆಯರು, ಮಹಿಳಾ ರಾಯಭಾರಿಣಿಗಳು ಇದ್ದಾರೆ? ಮನೆಯಲ್ಲಿ ಅವಳು ಹೇಗೆ ಜೀವಿಸುತ್ತಿದ್ದಾಳೆ? ಆಕೆ ತನ್ನ "ಪ್ರಿಯ ಪುರುಷನಿಂದ" ಏನನ್ನು ಪಡೆದಿದ್ದಾಳೆ? ಇದಕ್ಕೆಲ್ಲ ಒಂದೇ ಉತ್ತರ, — "ಅನಾದರ". ಎಷ್ಟೋ ಬಾರಿ ಇವು ಗಮನಕ್ಕೂ ಬರುವುದಿಲ್ಲ. ಗಂಡು ಮತ್ತು ಹೆಣ್ಣು ಒಬ್ಬರನ್ನೊಬ್ಬರು ಸೃಷ್ಟಿಸುತ್ತಾರೆ. ಸ್ತ್ರೀ ತನ್ನ ಪುರುಷ ಬಯಸಿದಂತೆಯೇ ನಡೆದುಕೊಳ್ಳುತ್ತಾಳೆ. ಅವನೇನಾದರೂ ಅವಳ ಸೌಂದರ್ಯದ ಬಗ್ಗೆ ಗಮನವಿಟ್ಟರೆ, ಮತ್ತಷ್ಟು ಸುಂದರಿಯಾಗಿ ಕಾಣಲು ಪ್ರಯತ್ನಿಸುತ್ತಾಳೆ. ಅಥವಾ ಅವಳ ಹಾಸ್ಯಪ್ರಜ್ಞೆಯಲ್ಲಿ ಆಸಕ್ತಿ ತೋರಿಸಿದರೆ ತನ್ನ ಹಾಸ್ಯಪ್ರಜ್ಞೆಯನ್ನು ಮತ್ತಷ್ಟು ಬೆಳೆಸಿಕೊಳ್ಳುತ್ತಾಳೆ.

ಆದಾಗ್ಯೂ ನಾನು ಫೆಮಿನಿಸ್ಟ್ ಅಲ್ಲ, ಹೆಂಗಸರೆಲ್ಲ ಪುರುಷರಂತೆಯೇ ಬಾಳಬೇಕು, ಸ್ತ್ರೀಯರು ಪ್ರೇಮಿಸುವುದೆಂದರೆ ಗುಲಾಮಗಿರಿಯ ದ್ಯೋತಕ ಇತ್ಯಾದಿ ವಾದಗಳನ್ನು ಮೂರ್ಖತನವೆನ್ನುತ್ತೇನೆ.

ಇತ್ತೀಚೆಗೆ ಸ್ವೀಡನ್ನಿನಲ್ಲಿ ನನ್ನ, "ಎ ಚಾರ್ಮಿಂಗ್ ವುಮನ್ ವಿತ್ ಎ ಫ್ಲವರ್ ಅಂಡ್ ವಿಂಡೋಸ್ ಫೇಸಿಂಗ್ ನಾರ್ತ್" ನಾಟಕವನ್ನು ನೋಡಿ ತುಂಬ ಸಂತೋಷವಾಯಿತು, ಅಚ್ಚರಿಯೂ ಸಹ, ಕಾರಣ ಸ್ವೀಡಿಷರು ಕಟ್ಟಾ ಫೆಮಿನಿಸಂ ವಾದಿಗಳು, ಅವರಿಗೆ "ಸ್ತ್ರೀ ಪ್ರೀತಿಯಿಲ್ಲದೆ ಬದುಕಲಾರಳು" ಎಂದು ವಾದಿಸುವ ನನ್ನ ನಾಟಕ ಆಸಕ್ತಿ ಹುಟ್ಟಿಸಿದ್ದು ಹೇಗೆ? ಎಂದು ಸೋಜಿಗ. ನಾಟಕ ಪ್ರದರ್ಶನದ ಮೊದಲ ಪ್ರದರ್ಶನವನ್ನೇ ವೀಕ್ಷಿಸಿದ್ದೆ. ಅನಂತರ ಸ್ವೀಡನ್ನಿನ ನಗರಗಳಲ್ಲಿ ನಾಟಕ ತಂಡದವರೊಂದಿಗೆ ಸಂಚರಿಸಿದ್ದೆ. ಅತಿಥಿಗಳನ್ನು ಸತ್ಕರಿಸುವುದರಲ್ಲಿ ಸ್ವೀಡಿಷರು. ಹಾಗೂ ರಷಿಯನ್ನರೂ ತಾದಾತ್ಮ್ಯತೆ ಹೊಂದಿದ್ದಾರೆಂದೆನ್ನ ಅನಿಸಿಕೆ. ಎಲ್ಲ ಹೆಂಗಸರೂ — ಸ್ವತಂತ್ರತಾ ವಾದಿಗಳೂ ಸೇರಿದಂತೆ ಸಾಮಾನ್ಯವಾಗಿ ಅವಲಂಬಿತವಾಗಿರುವುದು ಪ್ರೇಮಕ್ಕೆ.

ನಾನು ಈ ಮೊದಲೇ ಹೇಳಿದಂತೆ ಬಹಳ ಮಂದಿ ಸ್ತ್ರೀಯರು ತಮ್ಮ ಜೀವನದಲ್ಲಿ ಮತ್ತೊಂದು ರೀತಿಯ ಪ್ರಯೋಗ ನಡೆಸುತ್ತಿದ್ದಾರೆ. ಗಂಡಸರಂತೆಯೇ ಜೀವಿಸಲು, ಅವರಂತೆಯೇ ತಮ್ಮ ನಡನುಡಿಗಳನ್ನು ರೂಢಿಸಿಕೊಂಡಿದ್ದಾರೆ. ಯಾರ ಆತಂಕಕ್ಕೂ ಒಳಪಡದೆ ಸ್ವತಂತ್ರರಾಗುವ ಭರದಲ್ಲಿ ಕಠೋರ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತಿದ್ದಾರೆ. ಸ್ತ್ರೀ ಸಹಜ ಮೃದು ಭಾವನೆಗಳು ತುಳಿಯಲ್ಪಟ್ಟರೆ ಅದು ಮಾನಸಿಕ ಹಾಗು ದೈಹಿಕ ಅಸ್ವಸ್ಥತೆಗೆ ಕಾರಣವಾಗುತ್ತವೆ.

ನಾನು ಸ್ತ್ರೀಯರನ್ನು ಪ್ರೀತಿಸುಷ್ಟೇ ರಂಗಭೂಮಿಯನ್ನೂ ಪ್ರೀತಿಸುತ್ತೇನೆ. ನಟನೆಯನೆ ಬಗ್ಗೆ ನನಗಿರುವ ಒಲುಮೆಯನ್ನೇ ನನ್ನ ಮುಂದಿನ ನಾಟಕಮಾಲೆಯಲ್ಲಿ ವೈಶಿಷ್ಟ್ಯಪೂರ್ಣವಾಗಿ ವಿವರಿಸಲು ನಿರ್ಧರಿಸಿದೆ. ಈ ಸಾಲಿನ ಮೊದಲ ನಾಟಕ "ಎ ಚಾಮಿಂಗ್ ವುಮನ್ ವಿತ್ ಎ ಪ್ಲಾಂಟ್ ಅಂಡ್ ವಿಂಡೋಸ್ ಫೇಸಿಂಗ್ ನಾರ್ತ್" — ಸುಪ್ರಸಿದ್ಧ ನಟಿ ಟಾಟಿಯಾನಾ ಡೋರೋನೀನಾಗೆಂದೇ ರಚಿತವಾಯಿತು. ಜನಪ್ರಿಯ ನಟಿ ಎಂದು ಹೆಸರಾದ ಮಾರಿಯಾ ಬಾಬಾ

ನೋವಾ ಕಲಾವಿದೆಗೆ "ಅನ್ ಏಜಿಂಗ್ ಆಕ್ಟ್ರೆಸ್ ಇನ್ ದಿ ರೋಲ್ ಆಫ್ ದೋಸ್ತೋವ್‌ಸ್ಕಿ'ಸ್ ವೈಫ್" ನಾಟಕವನ್ನು ರಚಿಸಿದೆ. ಆದರೆ ವಿಷಾದವೆಂದರೆ ನಾನು ಈ ನಾಟಕವನ್ನು ಬರೆದು ಮುಗಿಸುವುದರೊಳಗೆ ಮಾರಿಯಾ ಬಾಬಾನೋವಾ ನಟಿಯ ನಿಧನ. ಆಕೆಗೆಂದೇ ನಾನು ನಿರ್ಮಿಸಿದ್ದ ಪಾತ್ರದಲ್ಲಿ ಮತ್ತೊಬ್ಬರನ್ನು ಕಲ್ಪಿಸಿಕೊಳ್ಳಲೂ ಅಸಾಧ್ಯವಾಗಿತ್ತು ನನಗೆ. ಇದೂ ಸಾಲದಂತೆ ಈ ಮೊದಲು ಪ್ರದರ್ಶನಕ್ಕೆ ಒಪ್ಪಿಕೊಂಡಿದ್ದ ರಂಗ ಮಂದಿರಗಳೂ ಪ್ರದರ್ಶನಕ್ಕೆ ನಿರಾಕರಿಸಿದವು. ವಿಧಿವಶಾತ್ ಈ ನಾಟಕದ ಪ್ರಥಮ ಪ್ರಯೋಗ ಫ್ರಾನ್ಸಿನಲ್ಲಾಯಿತು.

ಪ್ಯಾರಿಸ್‌ನ ಯುರೋಪಿಯನ್ ಥಿಯೇಟರ್ ಫ್ರಾನ್ಸಿನ ರಾಷ್ಟ್ರೀಯ ನಾಟಕ ಮಂದಿರ. ಇದರ ನಿರ್ದೇಶಕ ಇಟಲಿಯ ಸುಪ್ರಸಿದ್ಧ ಕಲಾ ನಿರ್ದೇಶಕ ಜಿಯೋಗಿಯೋ ಸ್ಟ್ರೆಹ್ಲರ್. ಈ ರಂಗ ಮಂದಿರಕ್ಕೆ ತನ್ನದೇ ಆದ ಕಲಾವಿದರ ತಂಡವಿರಲಿಲ್ಲ. ನಾಟಕದ ಮುಖ್ಯ ಪಾತ್ರಗಳನ್ನು ಹೆಸರಾಂತ ಕಲಾವಿದೆ ಕಮಿಡಿ-ಫ್ರಾಂಕೈಸ್‌ನ ಡೆನಿಸ್ ಜೆನ್ಸ್ ಮತ್ತು ಕಿರಿಯ ನಟ ಜೀನ್-ಈವ್ಸ್ ಚಾಟ್‌ಲೆಟ್ ನಿರ್ವಹಿಸಿದರು. ಈ ನಾಟಕವನ್ನು ನಿರ್ದೇಶಿಸಿದವರು ಪ್ರೊ. ವಿವಿಯನ್ ಥಿಯೋಫಿಡಿಸ್. ಈ ನಾಟಕ ನನಗೆ ಬಹಳ ತೃಪ್ತಿ ನೀಡಿದ್ದು ಮಾತ್ರವಲ್ಲದೆ ನಾನು ಭೇಟಿಯಾಬೇಕೆಂದುಕೊಂಡಿದ್ದ ಪ್ರಸಿದ್ಧ ವ್ಯಕ್ತಿಗಳನ್ನು ನೋಡುವ ಸದವಕಾಶವೂ ಒದಗಿತ್ತು.

ಪ್ಯಾರಿಸ್‌ನ ನಂತರ ನಾಟಕ ಪ್ರದರ್ಶನ ಉಳಿದೆಡೆಗೆಳಲ್ಲೂ ನಡೆಯಿತು. ಇಷ್ಟರಲ್ಲಿ ನನ್ನ ನಾಟಕಗಳ ವಿಮರ್ಶೆ ನಡೆದಿತ್ತು. ಸ್ತ್ರೀಯರನ್ನು ಮತ್ತು ಕಲಾವಿದರನ್ನು ಮುಖ್ಯ ವಸ್ತುವನ್ನಾಗಿ ರೂಪಿಸಿದುದಕ್ಕೆ ನನಗೆ ಪ್ರಶಂಸೆಯೇನೂ ಸಿಗಲಿಲ್ಲ, ನಾಟಕದಲ್ಲಿ ಹೆಚ್ಚು ಗಮನ ಸೆಳೆವಂತಹ ವಿಷಯವಿಲ್ಲ, ನಾಟಕದ ವಸ್ತುವೂ ಆಳವಾಗಿಲ್ಲ ಎಂದು ಹೇಳಲಾಯಿತು. ಈ ಬಗ್ಗೆ ನನ್ನ ಅಸಮಾಧಾನವನ್ನು ನಾಟಕಕಾರ ಅಲೆಕ್ಸಿ ಆರ್ಬುಜೋವ್‌ರೊಂದಿಗೆ ಫೋನಿನಲ್ಲಿ ಸಂಭಾಷಿಸುವಾಗ ತಿಳಿಸಿದಾಗ ಅತ್ತ ನಗುತ್ತಾ, "ಪತ್ರಿಕೆಗಲ್ಲದಿದ್ದರೂ ಜನರ ಪ್ರಶಂಸೆಯುದೆಯಲ್ಲ" ಎಂದರು.

ನಂತರ ಬಂದ ನನ್ನ ನಾಟಕದ ಹೆಸರು ಬಹಳಷ್ಟು ಜನ ನಿರ್ಮಾಪಕರಿಗೆ ಸರಿಯೆನಿಸಲಿಲ್ಲ. "ಐ ಆ್ಯಮ್ ಸ್ಟಾಂಡಿಂಗ್ ಇನ್ ಫ್ರಂಟ್ ಆಫ್ ಎ ರೆಸ್ಟೋರೆಂಟ್ ಇಟ್ ಈಸ್ ಟೂ ಲೇಟ್ ಟು ಗೆಟ್ ಮ್ಯಾರೀಡ್ ಅಂಡ್ ಟೂ ಸೂನ್ ಟು ಲೈ ಡೌನ್ ಅಂಡ್ ಡೈ". ಕೆಲವರು ಅದರ ಮೊದಲ ಭಾಗ ಉಳಿಸಿಕೊಂಡರೆ, ಇನ್ನು ಕೆಲವು ಮಂದಿ ನಾನೇ ಇಟ್ಟ "ಶಲ್ ವಿ ಕಿಲ್ ಎ ಮ್ಯಾನ್ ?" ನನ್ನ ಮಟ್ಟಿಗೆ ಅರ್ಥಪೂರ್ಣವಾಗಿರುವ ಈ ಶೀರ್ಷಿಕೆಯನ್ನೇ ಬಳಸಿದರು. ಒಂದು ಹೆಣ್ಣಿನ ಪ್ರೀತಿ, ನಿರಂತರ ಒಂಟಿತನಕ್ಕೆ ಸಂಬಂಧಿಸಿದ ಈ ನಾಟಕದ ಶೀರ್ಷಿಕೆಯ ಸ್ಫೂರ್ತಿ ಜಾನಪದ ಗೀತೆಯಿಂದ. "ಇಟ್ ಈಸ್ ಟೂ ಲೇಟ್ ಟು ಗೆಟ್ ಮ್ಯಾರೀಡ್ ಅಂಡ್ ಟೂ ಅರ್ಲಿ ಟು ಲೈ ಡೌನ್ ಅಂಡ್ ಡೈ" ಈ ನಾಟಕದಲ್ಲಿ ಮೇಲಿನ ಕಠಿಣ ವಾಕ್ಯಗಳು ೩೫ ವರ್ಷದ ಮಹಿಳೆಯೊಬ್ಬಳ ಶಿಲಾಲೇಖನವಾಗುತ್ತದೆ.

ನನಗೆ ಅನೇಕ ಪತ್ರಗಳು - ಹೆಚ್ಚಿನವು ಸ್ತ್ರೀಯರಿಂದ ಬರುತ್ತವೆ. ನಾನು ಬರೆದ ಸ್ತ್ರೀ ಪ್ರಧಾನ ನಾಟಕಗಳನ್ನು ಕುರಿತಂತೆ, ಆ ಪತ್ರಗಳಲ್ಲಿನ ಕೆಲವು ಉಲ್ಲೇಖನಗಳನ್ನು ಹಾಗೇ ಉಳಿಸಿಕೊಂಡಿದ್ದೇನೆ, ಅಂತಹವುಗಳಲ್ಲಿ ಒಬ್ಬಾಕೆ ತನ್ನ ಪತ್ರದಲ್ಲಿ ಹೇಳುತ್ತಾಳೆ "ಶಿ ಲೀವ್ಸ್ ವಿತೌಟ್ ಲವ್ ಆರ್ ಡೆತ್" ಮಹಿಳೆ ಪುರುಷನಿಲ್ಲದೆಯೇ ಬಾಳಲು ಕಲಿಯಬೇಕು, ಹೆಣ್ಣು ಸ್ವತಂತ್ರವಾಗಿ ಬಾಳಬೇಕು. ಕೊನೆಯಲ್ಲಿ, "ವಾಟ್ ಈಸ್ ದಿ ಯೂಸ್ ಆಫ್ ಹಸ್‌ಬೆಂಡ್ ?" ಇಂತಹ ಕೆಲವು ವಾಕ್ಯಗಳನ್ನು — ನಾನು ಪತ್ರಗಳಿಂದ ಅಪಹರಿಸಿದೆ ಎಂದು ಒಪ್ಪಿಕೊಳ್ಳುತ್ತೇನೆ.

ಜನರು ಪ್ರತಿಯೊಂದು ಶತಮಾನವೂ ಹೊಸ ಹೊಸ ಬದಲಾವಣೆಗಳನ್ನು ಕಾಣುವುದೆನ್ನುವರು. ಆದರೆ ನಾವು ಮನುಷ್ಯರು ಹೆಚ್ಚೆಂದರೆ ನಮ್ಮ ರೀತಿ ನೀತಿಗಳಲ್ಲಿ ಬದಲಾಗಬಹುದು, ಆದರೆ ಪ್ರೇಮ, ಪುರುಷ, ಸ್ತ್ರೀ, ಸಾವು— ಇವುಗಳ ಮೌಲ್ಯ ಹಾಗೆಯೇ ಉಳಿಯುತ್ತವೆ. ನನ್ನ ನಾಟಕಗಳಲ್ಲಿ ಪುರುಷರದು ಸದಾ "ನೆಗೆಟಿವ್ ರೋಲ್". ಇಷ್ಟು ಮೃದು ಮನಸಿನ ಸ್ತ್ರೀಯರು ನಮ್ಮೊಡನೆ ಹೇಗೆ ಜೀವಿಸಿದ್ದಾರೆಂಬುದೇ ನನಗಿನ್ನೂ ಅರ್ಥವಾಗಿಲ್ಲ, ನಾವು ಗಂಡಸರು ಎಷ್ಟು ಸಂಕುಚಿತ ಸ್ವಭಾವದವರು ? ನಾನು ಯಾರ ಬಗ್ಗೆ ಬರೆಯಲು ಇಚ್ಛಿಸುವೆನೋ ಆಕೆಯೇ ನನ್ನ

ಆದರ್ಶ ನಾರಿ. ನಾನು ಆಕೆಯನ್ನು "ವಂಡರ್‌ಫುಲ್ ವುಮನ್" ಎಂದು ಕರೆಯುತ್ತೇನೆ. ಅವಳು ಪ್ರೀತಿ ಸಲ್ಪಡುವುದರಿಂದ ಸಂತಸ ಪಡುವುದಕ್ಕಿಂತಲೂ ಪ್ರೀತಿ ನೀಡಿ ಸಂತೋಷಿಸುತ್ತಾಳೆ.

**ಮ್ಯಾಗಜೈನ್: "ಸ್ಪುಟ್‌ನಿಕ್"**

**ಅನುವಾದ: ಗೀತಾ ಜಿ. ಎಸ್.**

---

## ಎಡೆಗುದಿ

ಅವ್ವಾ ... ... ...
ಆಸರಾಗೇತಲ್ಲ ನನ್ನ ಮೈಯಿಗ
ಬೇಸರಾಗೇತಲ್ಲ?
ಅವ, ನನ್ನ ಮರೆತಾನ ಹ್ಯಾಂಗ?

ಅಂದು,
ಕರಿಯ ಕಂಬಳಿ ಒಳಗ ಹುದುಕಿ
ಗಿದುಕಿಕೊಂಡು ಮಲಗಿ
ಕತ್ತಲಲಿ ಕರಗಿ
ಮುಲುಕಾಟ — ಕುಲುಕಾಡಿದಾಗ
ಗಪ್ಪೆಂದು ಬಾಯಿ ಅಮುಕಿ
ಹಿಡಿದು ಹೋದವನು ತಿರುಗಿನ್ನು
ಬಂದಿಲ್ಲ; ಯಾಕ?
ಅವ, ನನ್ನ ಮರೆತು ಹೋದಾನ ಹ್ಯಾಂಗ!

ಹೊಡೆಯುವ ಮಳೆಗಾಳಿ ಸ್ಯ್ಯೋ - ಯ್ಯನೆ ಬಡಿದು
ಎದೆನಡುಗಿ ಸೆರಗು ಸರಿದು
ಒಡಲಾಳದ ಬಿಸಿರಕ್ತ ಹೆಪ್ಪುಗಟ್ಟಿತೆಂದು
ಹೆದರಿ:
ಕೈಯಿಗೆ ಕೈ ಮಸೆದು; ಬೆಸೆದು ಕಾವನು ತಂದು
ತನ್ನೆದೆಯ ಶಾಖದಲಿ ಎನ್ನೆದೆಯ ಚಳಿ
ಕರಗಿಸಿ ಹೋದವನು ತಿರುಗಿನ್ನು
ಬಂದಿಲ್ಲ; ಯಾಕ?
ಅವ, ನನ್ನ ಬಿಟ್ಟಾನ ಹ್ಯಾಂಗ!

ಮುಡಿದ ಮಲ್ಲಿಗೆಯ ಸೊಂಪನ್ನು ತೀಡಿ
ಮೆತ್ತಗೆ ಸವರಿ, ಕಂಪನ್ನು ಉಸಿರಾಡಿ
ನನ್ನ ಗ್ರಾದಿಯ ಮೇಲೆ ಬೆರಳಾಡಿಸಿ —
ಸುಕ್ಕ ಜಾಡಿಸಿ
ಅಂದದ ಹೂಗಳಿಂದ ಘಮ ಘಮಿಸುವ
ಚೆಂದದ ರಂಗೋಲಿ ಬಿಡಿಸಿ
ಹೋದವನು ತಿರುಗಿನ್ನು ಬಂದಿಲ್ಲ
ಯಾಕ? ಅವ,
ನನ್ನ ಬಿಟ್ಟು ಹೋದಾನ ಹ್ಯಾಂಗ! ?

**ನಿರ್ಮಲಾ ಅನವಟ್ಟಿ.**

# ಮೌನ ಮಾತಾದಾಗ

---

**ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನ ವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗು ಅನುಭವಗಳನ್ನು ಪುಟ್ಟ ಲೇಖನದ ರೂಪದಲ್ಲಿ ಬರೆದು ಕಳಿಸಿದ ಲೇಖಕರಿಗೆಂದು "ಮೌನ ಮಾತಾದಾಗ" ಅಂಕಣವಿದೆ. ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.**

**ಸಂ. ಮಂ.**

---

ಖ್ಯಾತ ಸಾಹಿತಿಯೊಬ್ಬರನ್ನು ನಮ್ಮ ಕಾಲೇಜಿಗೆ ಬರಮಾಡಿಕೊಂಡಾಗ ನಡೆದಿದ್ದು. ಅವರು ಮಾತನಾಡುವಾಗ ಯಾರಾದರೂ ಪ್ರಶ್ನೆಗಳನ್ನು ಕೇಳುವುದಿದ್ದರೆ ಕೇಳಬಹುದೆಂದು ವಿದ್ಯಾರ್ಥಿನಿಯರಿಗೆ ಹೇಳಿದರು. ಬಹಳಷ್ಟು ಜನ ಪ್ರಶ್ನೆಗಳನ್ನೂ ಕೇಳಿದರು. ಅದರಲ್ಲಿ ಒಬ್ಬ ಹುಡುಗಿ ಕೇಳಿದ್ದು, "ಸ್ತ್ರೀಯರ ವಿದ್ಯಾಭ್ಯಾಸದ ಬಗ್ಗೆ ನೀವು ಏನು ಹೇಳುತ್ತೀರಿ" ಎಂದು. ಆಗ ಅವರು ನಕ್ಕು, "ಇಷ್ಟು ದೊಡ್ಡ ಕಾಲೇಜಿನಲ್ಲಿ ಅದೂ ಮಹಿಳಾ ಕಾಲೇಜಿನಲ್ಲೇ ಓದುತ್ತಿರುವ ನೀವು ಈ ಪ್ರಶ್ನೆ ಕೇಳಬಹುದೆ? ಈ ಪ್ರಶ್ನೆಯ ಅಗತ್ಯವಿಲ್ಲವೆನಿಸುತ್ತದೆ." ಎಂದೆಂದರು ನಗುವಿನಲ್ಲಿ ಅವರೊಡನೆ ನಾವೂ ಪಾಲ್ಗೊಂಡಿದ್ದೆವು. ಆದರೆ ಈಗ ಅನ್ನಿಸುತ್ತಿದೆ, ಮಹಿಳೆಯರಿಗೆ ವಿದ್ಯಾಭ್ಯಾಸವೇ ಸಾಲದು ವಿವೇಕ ಆತ್ಮಸ್ಥೈರ್ಯವನ್ನೂ ಬೆಳೆಸಿಕೊಳ್ಳಬೇಕು ಎಂದು.

ಮೊದಮೊದಲು ಸ್ತ್ರೀಯರಿಗೆ ವಿದ್ಯಾಭ್ಯಾಸವಿದ್ದರೆ, ಆರ್ಥಿಕ ಸ್ವಾತಂತ್ರ್ಯವಿದ್ದರೆ ಶೋಷಣೆಗೆ ಒಳಗಾಗುವುದಿಲ್ಲವೆಂಬ ಭಾವನೆಯಿತ್ತು. ಆದರೀಗ ಎಷ್ಟೋ ಜನ ವಿದ್ಯಾವಂತೆಯರಾಗಿದ್ದರೂ, ಉದ್ಯೋಗಸ್ಥೆಯರಾಗಿದ್ದರೂ ಶೋಷಣೆ ತಪ್ಪಿಲ್ಲ.

ನಿಜ ಈಗಿನ ಪರಿಸ್ಥಿತಿಯಲ್ಲಿ ಹೆಣ್ಣು ಎಷ್ಟೇ ಓದಿರಲಿ ಆ ಓದಿಗೆ ಬೆಲೆಯಿಲ್ಲ. ಎಂಥ ಕೆಲಸವೇ ಇರಲಿ ಅದಕ್ಕೆ ಬೆಲೆಯಿಲ್ಲ. ಬರೀ ಉದ್ಯೋಗವಿರುವ ಹುಡುಗಿಯರು ಮಾತ್ರ ಸಾಕಾಗುವುದಿಲ್ಲ ಈಗಿನ ಕೆಲವರಿಗೆ, ಆಕೆಯೊಡನೆ ಬರುವ ವರದಕ್ಷಿಣೆಯ ಮೊತ್ತವೂ ದೊಡ್ಡದಾಗಿರಬೇಕು, ಸರಿ, ಈಗಿನ ಗಂಡಸರಿಗಂತೂ ಹೃದಯವಿಲ್ಲ, ಮಾನವೀಯತೆಯ ಹೆಸರೇ ಕೇಳಿದವರಲ್ಲ, ಆದರೆ ನಮ್ಮ ಹುಡುಗಿಯರಿಗಾದರೂ ತಿಳಿ ಬೇಡವೆ? ಓದಿಯೂ, ಉದ್ಯೋಗಸ್ಥೆಯರಾಗಿಯೂ ವರದಕ್ಷಿಣೆ ಇತ್ಯಾದಿ ಸಮಸ್ಯೆಗಳಿಗೆ ಬಲಿಯಾಗುತ್ತಿರುವರಲ್ಲ ಎನಿಸುತ್ತದೆ, ಹೆಣ್ಣು ಮಕ್ಕಳು ತಾವೆಷ್ಟೇ ಓದಿದ್ದರೂ ತಾವು ಗಂಡಸರಿಗಿಂತ ಕಮ್ಮಿ ಎಂದು ತಮಗೆ ತಾವೇ ತೀರ್ಮಾನಿಸಿಕೊಂಡಂತೆ ಕಾಣಿಸುವುದು. ಹೀಗೆ ಹೇಳಲು ಕಾರಣ, ಇತ್ತೀಚೆಗೆ ನನ್ನ ಗೆಳತಿಯೊಬ್ಬಳು, ಮಾತನಾಡುತ್ತಿರುವಾಗ ಹೇಳಿದ ಮಾತು. ಅವಳೂ ಪದವೀಧರೆ. ಅವಳು ಹೇಳಿದ್ದೇನೆಂದರೆ, "ನೋಡು. ಮದುವೆಗೆ ಮುಂಚೆ ನಾವು ಎಷ್ಟೇ ಸಮಾನತೆ, ಸ್ವಾಭಿಮಾನ, ಸ್ವಾತಂತ್ರ್ಯ ಅಂತ ಹೋರಾಡಿದರೂ ಕಟ್ಟಿಕೊಂಡ ಮೇಲೆ ಗಂಡ ಎಂದರೆ ದೇವರೆನ್ನುವ ಭಾವವನ್ನು ಬೆಳೆಸಿಕೊಳ್ಳಬೇಕಾಗುತ್ತದೆ" ಎಂದಳು. ಅದಕ್ಕೆ ನಾನೆಂದೆ "ನಿನ್ನ ಗಂಡ ನಿನಗೆ ದೇವತೆಯ ಪಟ್ಟ ಕೊಟ್ಟಾಗ ನೀನು ಈ ಭಾವನೆಯನ್ನು ಬೆಳೆಸಿಕೊಳ್ಳಬಹುದು". ಅದಕ್ಕವಳು ಮಾತನಾಡಲಿಲ್ಲ.

ಇವಳೇ ಒಮ್ಮೆ ನಾವು ಗೆಳತಿಯರೆಲ್ಲ ಚರ್ಚಿಸುವಾಗ ಗಂಡಸರು ವ್ಯಭಿಚಾರ ಮಾಡಿದಾಗ ಅವರ ಹೆಂಡತಿಯರು ಏನು ಮಾಡಬೇಕು ಎಂಬ ಪ್ರಶ್ನೆಗೆ ಈಕೆ ಹೇಳಿದ್ದು, ಆ ಹೆಂಗಸರೂ ಅದೇ ರೀತಿ ನಡೆದು, ಗಂಡಸರಿಗೆ ಬುದ್ಧಿ ಕಲಿಸಬೇಕು ಎಂದು. ಆದರೀಗ ನೋಡಿದರೆ ತದ್ವಿರುದ್ಧ. ನನಗೆ ನಗು ಬಂತು, ಜೊತೆಗೆ ಸಿಟ್ಟೂ ಸಹ. ಸೂಕ್ಷ್ಮವಾಗಿ ಅವಲೋಕಿಸಿದಾಗ, ಅವಳ ಮುಖದಲ್ಲಿ ಕಂಡೂ ಕಾಣದಂತ ನೋವಿನ ನೆರಳು, ಎಷ್ಟು ಪ್ರಶ್ನಿಸಿದರೂ ಉತ್ತರಿಸಲಿಲ್ಲ. ಅವಿ

ದ್ಯಾವಂತೆಯರಾದರೂ ಆಗಿದ್ದರೆ, ಅವರ ಆಲೋಚನೆಯ ಪರಿಧಿಯೇ ಅಷ್ಟು, ಮೊದಲಿನಿಂದಲೂ ಹೆಣ್ಣು ಕೀಳು ಎಂಬ ಭಾವವನ್ನು ಅವರ ಹಿರಿಯರು ಅರೆದು ಕುಡಿಸಿದ್ದಾರೆ, ಸಹನೆಯೇ ಹೆಣ್ಣಿಗೆ ಭೂಷಣ ಎಂಬ ವಿಚಾರಗಳನ್ನು ತಲೆ ತುಂಬ ತುಂಬಿಸಿಕೊಂಡಿದ್ದಾರೆ ಎನ್ನಬಹುದು. ಆ ಕಾರಣದಿಂದಲೇ ವರದಕ್ಷಿಣೆಯಂಥ ಸಮಸ್ಯೆಗಳಿಗೆ ಗುರಿಯಾಗಿ, ಪರಿಸ್ಥಿತಿಯ ಬಲಿಪಶುಗಳಾಗುತ್ತಾರೆ. ಪ್ರತಿಭಟಿಸುವ ಧೈರ್ಯವಿಲ್ಲದೇ ಎಲ್ಲವನ್ನೂ ಸಹಿಸಿ, ಕೊನೆಗೊಂದು ದಿನ ಹೇಳ ಹೆಸರಿಲ್ಲದಂತಾಗುತ್ತಾರೆ.

ಆದರೆ ವಿದ್ಯಾವಂತೆಯರಾಗಿಯೂ, ತಮಗೂ ವ್ಯಕ್ತಿತ್ವವಿದೆಯೆಂಬುವುದೂ ಮರೆತು, ಬೇರೊಬ್ಬರ ದಬ್ಬಾಳಿಕೆಗೆ ಒಳಗಾಗಿ ತಮ್ಮ ಹಣೆಯ ಬರಹವೇ ಹೀಗೆ ಎನ್ನುವವರಿಗೇನು ಹೇಳುವುದು? ಹೌದು. ಎಷ್ಟೋ ಮನೆಗಳಲ್ಲಿ ಹೆಣ್ಣು ಮಕ್ಕಳೂ ಗಂಡು ಮಕ್ಕಳಷ್ಟೇ ಓದಿದ್ದರೂ, ಗಂಡು ಮಕ್ಕಳಿಗಿರುವಷ್ಟು ಪ್ರಾಶಸ್ತ್ಯ ಹೆಣ್ಣು ಮಕ್ಕಳಿಗಿರುವುದಿಲ್ಲ, ಇವನ್ನು ಸಹಿಸಿಕೊಂಡಿದ್ದರೆ ಸಹನೆಯೆನಿಸುವುದಿಲ್ಲ ಹೇಡಿತನವೆನಿಸುತ್ತದೆ.

ಸುಮ್ಮ ಸುಮ್ಮನೆ ನಮ್ಮನ್ನು ಅವರು ಶೋಷಣೆ ಮಾಡುತ್ತಾರೆ, ಇವರು ಶೋಷಿಸುತ್ತಾರೆಂದು ದೂರುವುದು ಸರಿಯಲ್ಲ. ಎಂಥ ಸಂದರ್ಭದಲ್ಲೂ ಎದೆಗೆಡದೆ ನಮ್ಮ ಆತ್ಮಗೌರವವನ್ನು ಕಾಪಾಡಿಕೊಂಡು, ಬೇರೆಯವರಿಗೂ ತೊಂದರೆಯಾಗದಂತೆ ವಿವೇಕದಿಂದ ಬಾಳಬೇಕು. ಸಮಾನತೆ ಹೆಸರಿನಲ್ಲಿ ಗಂಡಸರು ಮಾಡಿದ್ದೆಲ್ಲಾ ಮಾಡುತ್ತೇವೆಂದು ಧೂಮಪಾನ, ಮಧ್ಯಪಾನ ಇತ್ಯಾದಿ ಅನಾರೋಗ್ಯಕರ ಬೆಳವಣಿಗೆಯೆಡೆ ವಾಲಬಾರದು, ಈಗ ಪಾಶ್ಚಾತ್ಯರಲ್ಲಿ ಉದ್ಭವಿಸಿರುವ ಸಮಸ್ಯೆಗಳೇ ನಾಳೆ ನಮಗೂ ಎದುರಾಗುತ್ತವೆ. ತಪ್ಪು ಮಾಡಿದವರು ಯಾರೇ ಆಗಲಿ. ತಿಳಿಹೇಳಬೇಕು. ಆಗದಿದ್ದಲ್ಲಿ ಪ್ರತಿಭಟಿಸಬೇಕು. ಆದರೆಂದಿಗೂ ನಾವು ಮತ್ತೊಬ್ಬರ ಶೋಷಣೆಗೆ ಕಾರಣರಾಗಬಾರದು.

ಶ್ರೀಮತಿ.

---

ಎಲ್ಲ ಶ್ರಮಿಕರಿಗೂ ಶ್ರಮಿಕರ ದಿನಾಚರಣೆಯ ಶುಭಾಶಯಗಳು.

— ಮಾನಸ ಬಳಗ

## "ದೆವ್ವ - ಭೂತ, ಇತ್ಯಾದಿ"

ಅಳುತ್ತಿದ್ದ ಮಗುವನ್ನು ಮಲಗಿಸುತ್ತಾ ಮಲಗಿದ ನನಗೆ ಪಕ್ಕದ ಮನೆಯಿಂದ ವಿಚಿತ್ರವಾದ ಗಲಾಟೆ ಕೇಳಿಸಿತು. ಬೇಗ ಬೇಗ ಮಗುವನ್ನು ಮಲಗಿಸಿ ಹೊರ ಬಂದಾಗ ಪಕ್ಕದ ಮನೆಯಲ್ಲಿ ಒಬ್ಬನಿಗೆ ದೇವರು ಬಂದ ದೃಶ್ಯ ಕಾಣಿಸಿತು! ಆ ಮನೆಯಲ್ಲಿ ಕಳೆದ ಮೂರು ದಿನಗಳಿಂದಲೂ ಕಾಳಮ್ಮ ದೇವತೆಯ ಪಲ್ಲಕ್ಕಿಯನ್ನು ಪಕ್ಕದ ಊರಿನಿಂದ ತಂದು ಅದಕ್ಕೆ ಪೂಜೆ ಸಲ್ಲಿಸುತ್ತಾ ಇದ್ದರು. ಕಾರಣ ಆ ಮನೆಯಲ್ಲಿ ಸುಮಾರು 20 ವರ್ಷದ ಹುಡುಗಿಗೆ ತಲೆ ಸರಿ ಇರಲಿಲ್ಲ. ಆಕೆಗೆ ದೆವ್ವ ಹಿಡಿದಿದೆ ಎಂಬ ನಂಬಿಕೆ ಅವರದು. ಹಾಗಾಗಿ ದೇವರ ಸಹಾಯದಿಂದ ಆಕೆಗೆ ಹಿಡಿದ ದೆವ್ವವನ್ನು ಬಿಡಿಸಬಹುದೆಂಬ ನಂಬಿಕೆ ಅವರದು. ಇಂತಹ ಒಂದು ಸಂದರ್ಭದಲ್ಲೇ ಒಬ್ಬ ಮನುಷ್ಯನಿಗೆ ದೇವರು ಬಂದಿತ್ತು. ಆಗ ಸಮಯ ರಾತ್ರಿ ಹತ್ತು ಘಂಟೆಯಾಗಿರಬಹುದು. ಅಂತಹ ನಿಶ್ಶಬ್ದ ವಾತಾವರಣದಲ್ಲಿ 'ಹೂಂ ... ಹೂಂ ... ಹೂಂ ...' ಎಂದು ವಿಚಿತ್ರ ರೀತಿಯಲ್ಲಿ ಹೂಂಕರಿಸುತ್ತಿದ್ದ. ಈ ರೀತಿ ಹೂಂಕರಿಸುತ್ತಾ ಆತ ದೆವ್ವವನ್ನು ಬಿಡಿಸುವ ಕ್ರಿಯೆಯಲ್ಲಿ ತೊಡಗಿದ. ಆತ ಆ ಹುಡುಗಿಯ ತಲೆಕೂದಲು ಹಿಡಿದು ಮನೆಯ ಎದುರಿಗೆ ಇರುವ ಕೆರೆಗೆ ಎಳೆದುಕೊಂಡು ಹೋದ. ಜೊತೆಗೆ ಹಿಂಬಾಲಕರು ಹಾಗೂ ದೇವರನ್ನು ಹೊತ್ತ ಪಲ್ಲಕ್ಕಿ ಆತನನ್ನು ಹಿಂಬಾಲಿಸುತ್ತಿದ್ದರು. ಕೊರೆಯುವ ಚಳಿಯಲ್ಲಿ ಆಕೆಯ ತಲೆಗೂದಲು ಹಿಡಿದುಕೊಂಡು ನೀರಿನಲ್ಲಿ ಮುಳುಗಿಸಿ ಮುಳುಗಿಸಿ ಏಳಿಸುತ್ತಾ ಆಕೆಯನ್ನು ಪ್ರಶ್ನಿಸುತ್ತಿದ್ದ — "ಹೂಂ ಹೇಳು ನಾನು ಯಾರು?"

"... ... ರಾಮಣ್ಣ?" "ಯಾವ ರಾಮಣ್ಣ?" "ಚಿನ್ನೂರು ರಾಮಣ್ಣ".

ಆಕೆಯ ಈ ಉತ್ತರಗಳಿಂದ ದೇವರಿಗೆ ತೃಪ್ತಿಯಾಗಲಿಲ್ಲ. ಆತನಿಗೆ ಆಕೆ ತನ್ನನ್ನು ದೇವರೆಂದು ಗುರುತಿಸಬೇಕೆಂಬ ಅಪೇಕ್ಷೆ ಆದರೆ ಆಕೆ ಅವನನ್ನು ರಾಮಣ್ಣನೆಂದೇ ಗುರುತಿಸುತ್ತಿದ್ದಳು.

"ಹೂಂ... ... ಹೋಗುತ್ತೀಯೋ ಇಲ್ಲವೋ ಹೇಳು?" "ಹೋಗುತ್ತೇನೆ." "ಈ ನೀರಿನಲ್ಲೇ. ಬಿಟ್ಟು ಹೋಗುತ್ತೀಯಾ?" "ಇಲ್ಲ ನಾನೆಲ್ಲಿಗೂ ಹೋಗೋದಿಲ್ಲ."

ಆತನ ಪ್ರಶ್ನೆಗಳಿಗೆಲ್ಲ ಆಕೆಯದು ಒಂದೊಂದು ಸಾರಿ ಒಂದೊಂದು ಉತ್ತರ. ದೇವರು ಬಂದಾತನಿಗೆ ಅಸಹನೆಯಾಗುತ್ತಿತ್ತು. ನೀರಿನಲ್ಲಿ ಮುಳುಗಿಸಿ ಏಳಿಸಿದ್ದು ಸಾಲದೆ ತಲೆಗೂದಲನ್ನು ಹಿಡಿದು ಎಳೆದುಕೊಂಡು ಮನೆಗೆ ಬಂದು ತೆಳ್ಳನೆಯ ಬೆತ್ತದ ಕೋಲಿನಿಂದ ಆಕೆಯನ್ನು ಎಳೆದಾಡಿ ಹೊಡೆಯುತ್ತಿದ್ದ, 'ಬಿಟ್ಟು ಹೋಗುತ್ತೀಯೋ ಇಲ್ಲವೋ ಹೇಳು' ಎಂದು ಗೋಡೆಗೆ ತಲೆಯನ್ನು ಕುಟ್ಟುತ್ತಿದ್ದ. ಇಂತಹ ಹಲವಾರು ಹಿಂಸೆಗಳಿಂದಲೂ ಕೂಡ ಆಕೆಯನ್ನು ಹಿಡಿದ ದೆವ್ವ ಜಗ್ಗಲೇ ಇಲ್ಲ. ಹಾಗಾಗಿ

ಆತನ ಹಿಂಸೆ ಹೆಚ್ಚುತ್ತಲೇ ಇತ್ತು. ಕೊನೆಗೆ ದೇವರಿಗೇ ಸಾಕಾಯಿತೇನೋ, ಆತನ ವರ್ತನೆ ಬದಲಾಯಿತು. ನಾನು ಬಂದು ಬಹಳ ಸಮಯವಾಯಿತು. ನಾಳೆ ಮತ್ತೆ ಬರುತ್ತೇನೆಂದು ಆಕೆಯನ್ನು ಬಿಟ್ಟಿದ್ದೆ ನೇರರಸ್ತೆ ಕೂಡಿ ಓಡತೊಡಗಿದ. ಆತನ ಜನರು, ದೇವರನ್ನು ಹೊತ್ತ ಪಲ್ಲಕ್ಕಿಗಳೆಲ್ಲ ಅದೇ ವೇಗದಲ್ಲಿ ಅವನನ್ನು ಹಿಂಬಾಲಿಸಿದವು. ನೋಡಲಿಕ್ಕೆ ಜಿಗುಪ್ಸೆ ತರುವಂತಹ, ಅಸಹ್ಯ ಹುಟ್ಟಿಸುವಂತ ಇಂತಹ ನಾಟಕೀಯ ದೃಶ್ಯವನ್ನು ನೆರೆದವರೆಲ್ಲಾ ಅತ್ಯಂತ ಸಹಜ ದೃಶ್ಯವಿದು ಎನ್ನುವಂತೆ ವೀಕ್ಷಿಸುತ್ತಿದ್ದರು. ಆಕೆಯನ್ನು ಆ ದೇವರಿಂದ ಪಾರು ಮಾಡುವ ಮನಸ್ಸು ಯಾರಿಗೂ ಇರಲಿಲ್ಲ. ನಾವೂ ಸಹ ಅನಿವಾರ್ಯವಾಗಿ ಮೂಕ ಪ್ರೇಕ್ಷಕರೇ ಆಗಬೇಕಾಗಿತ್ತು, 'ಬೇಲಿಯೇ ಎದ್ದು ಹೊಲ ಮೇಯ್ದರೆ' ರಕ್ಷಣೆ ನೀಡುವವರಾರು? ಆಕೆಯ ತಂದೆ ತಾಯಿಗಳು ಸಹೋದರರು ಈ ಘಟನೆಯಲ್ಲಿ ಯಾವ ತಪ್ಪನ್ನೂ ಕಾಣದಿದ್ದಾಗ ಬೇರೆಯವರು ಎಷ್ಟರ ಮಟ್ಟಿಗೆ ತಿಳುವಳಿಕೆ ನೀಡಲು ಸಾಧ್ಯ. ಆ ಕುಟುಂಬ ಹಳ್ಳಿಗಾಡಿನ ಮೂಢ ನಂಬಿಕೆಗಳ ಮುಗ್ಧ ಕುಟುಂಬವೇನಲ್ಲ, ಹೊರ ಪ್ರಪಂಚದ ಬಗ್ಗೆಯೂ ಸಾಕಷ್ಟು ವ್ಯವಹಾರ ಜ್ಞಾನವಿದೆ. ಆದಾಗ್ಯೂ ಇಂತಹ ಮೌಢ್ಯತೆಗಳ ಬಗ್ಗೆ ಅವರ ನಂಬಿಕೆ ಎಂಥ ವಿಪರ್ಯಾಸ.

ಆ ಹುಡುಗಿ ಒಂದು ರೀತಿಯ ಮರುಳು ಸ್ವಭಾವದ ಹುಡುಗಿ. ಒಮ್ಮೊಮ್ಮೆ ಮಾತನಾಡಿದರೆ ಅತಿ ಮಾತಾಡುವುದು ಕೆಲವು ಸಾರಿ ತನ್ನ ಪಾಡಿಗೆ ತಾನಿದ್ದು ಬಿಡುವುದು. 1 ವರ್ಷದಿಂದೀಚೆಗೆ ಆಕೆಯ ಮಾನಸಿಕ ಸ್ಥಿತಿ ತೀರ ಹದಗೆಟ್ಟಿತ್ತು. ತನ್ನಷ್ಟಕ್ಕೆ ತಾನೇ ನಗುತ್ತಿದ್ದಳು, ಮಾತನಾಡಿಕೊಳ್ಳುತ್ತಿದ್ದಳು. ತನ್ನ ತಂದೆ ತಾಯಿ. ಸಹೋದರರು ನೆರೆಯವರು ಯಾರನ್ನೂ ಗುರುತಿಸದೇ ಪ್ರಪಂಚದಲ್ಲಿದ್ದ ಹಾಗೆ ಮಲಗಿದರೆ ಮಲಗೇ ಬಿಡುವುದು, ಬೇಕೆನಿಸಿದರೆ ಏನಾದರೂ ತಿನ್ನುವುದು, ಇಲ್ಲವಾದರೆ ಇಲ್ಲ. ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳಲೂ ಆಕೆಗೆ ಗೊತ್ತಾಗುತ್ತಿರಲಿಲ್ಲ. ಮನೋವೈದ್ಯರಲ್ಲಿ ತೋರಿಸಿ ಎಂದು ನಾವು ತಿಳಿಸಿ ಹೇಳಿದರೆ ಅವಳ ತಾಯ್ತಂದೆಗಳಿಗೆ ದೇವರು ದೆವ್ವದ್ದೇ ನಂಬಿಕೆ. ಆಕೆಯ ಸಹೋದರರಿಂದ, "ದೇವರ ಪ್ರಯತ್ನ ಮುಗಿಯಲಿ ಆಮೇಲೆ ನೋಡೋಣ" ಎಂಬ ಉತ್ತರ. ಹಾಗಾಗಿ ಆಕೆ ನಾನಾ ಚಿತ್ರಹಿಂಸೆಗಳಿಗೆ ತುತ್ತಾಗಬೇಕಾಯಿತು. ಕೊನೆಗೆ ಯಾವುದಕ್ಕೂ ವಾಸಿಯಾಗದೇ ಈಗ ಅನಿವಾರ್ಯವಾಗಿ ಮನೋವೈದ್ಯರಲ್ಲಿ ತೋರಿಸುತ್ತಿದ್ದಾರೆ. ಆಕೆ ಸಾಕಷ್ಟು ಸುಧಾರಿಸುತ್ತಿದ್ದಾಳೆ ಎನ್ನುವುದು ಸಮಾಧಾನದ ವಿಷಯ.

ಪ್ರೇಮಾವತಿ.

---

## ಅಂಗನವಾಡಿ ಕಾರ್ಯಕರ್ತೆಯರ ಪ್ರತಿಭಟನಾ ಮೆರವಣಿಗೆ

15 ರಾಜ್ಯಗಳ ಅಂಗನವಾಡಿ ಮಹಿಳಾ ಕಾರ್ಮಿಕರು ಏಪ್ರಿಲ್ 24ರಂದು ಇಂಡಿಯಾ ಗೇಟ್ ಲಾನ್ಸ್, ದೆಹಲಿಯಲ್ಲಿ ತಮ್ಮ ಬೇಡಿಕೆಗಳನ್ನು ಒತ್ತಾಯಿಸಿ ಪ್ರತಿಭಟನಾ ಮೆರವಣಿಗೆ ಮಾಡಿದರು. ಸುಮಾರು 300 ಜನ ಮಹಿಳಾ ಕಾರ್ಯಕರ್ತೆಯರಿದ್ದ ಈ ಪ್ರತಿಭಟನಾ ಮೆರವಣಿಗೆಯು ಸಂಬಳದ ಹೆಚ್ಚಳಕ್ಕೆ ಹಾಗೂ ಕೇಂದ್ರ ಸರ್ಕಾರದ ನೌಕರರೆಂದು ತಮನ್ನು ಪರಿಗಣಿಸಬೇಕೆಂಬ ತಮ್ಮ ಬೇಡಿಕೆಗಳನ್ನು ಒತ್ತಾಯಿಸಿತು.

ಸಿ. ಐ. ಟಿ. ಯು. ಹಾಗೂ ಇತ್ತೀಚೆಗೆ ಅಸ್ತಿತ್ವಕ್ಕೆ ಬಂದ ಆಲ್ ಇಂಡಿಯಾ ಅಂಗನವಾಡಿ ವರ್ಕರ್ಸ್ ಹಾಗೂ ಹೆಲ್ಪರ್ಸ್ ಯೂನಿಯನ್ಸ್ ಸಂಘಟಿಸಿದ ಈ ಪ್ರತಿಭಟನಾ ಮೆರವಣಿಗೆಯು ವಿಣ್ಸರ್‌ನಿಂದ ಇಂಡಿಯಾ ಗೇಟ್ ಲಾನ್ಸ್‌ವರೆಗೆ ಹೋಯಿತು.

600 ರೂಪಾಯಿ ಕಾರ್ಯಕರ್ತೆಯರಿಗೂ ಹಾಗೂ 400 ರೂಪಾಯಿ ಸಹಾಯಕಿಯರಿಗೂ ಕೊಡಬೇಕೆಂಬುದು ಇವರ ಒತ್ತಾಯವಾಗಿತ್ತು.

ಓದುಗರಲ್ಲಿ ಮನವಿ,

ಶತಮಾನಗಳಿಂದ ತುಳಿತಕ್ಕೊಳಗಾದ ಸ್ತ್ರೀಯರ ಧ್ವನಿಯಾದ ಮಾನಸ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಾರಂಭಿಸಿದರೂ, ಆರ್ಥಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಲು ಸಾಧ್ಯವಾಗದೆ ಇರುವುದನ್ನು ನೀವು ಈಗಾಗಲೇ ಗಮನಿಸಿರಬಹುದು.

ನಮ್ಮೆಲ್ಲರ ಪ್ರಾಮಾಣಿಕ ಪ್ರಯತ್ನವನ್ನೂ ಮೀರಿ ಅಡಿಗಡಿಗೆ ಎದುರಾಗುವ ಸಮಸ್ಯೆಯಿಂದಾಗಿ ಪತ್ರಿಕೆ ತುಂಬಾ ವಿಳಂಬ ಗತಿಯಲ್ಲಿ ಪ್ರಕಟವಾಗುತ್ತಿದೆ. ಪತ್ರಿಕೆಯ ವೆಚ್ಚವನ್ನು ಕಡಿಮೆ ಮಾಡುವ ಉದ್ದೇಶದಿಂದ ಒಂದು ಪುಟ್ಟದಾದ ಅಚ್ಚುಮೊಳೆಯ ಕೇಂದ್ರವನ್ನು ಈಗಾಗಲೇ ಪ್ರಾರಂಭಿಸಿದ್ದೇವೆ. ಇದರ ಖರ್ಚು ವೆಚ್ಚಗಳೊಂದಿಗೆ ಬಾಡಿಗೆಗೆ ಹಣ ಹೊಂದಿಸುವುದು ದುಸ್ತರವಾಗುತ್ತಿದೆ. ಈ ಹಂತದಲ್ಲಿ ಪತ್ರಿಕೆಯ ಆತ್ಮೀಯ ಹಿತೈಷಿಗಳಾದ ನಿಮಗೆ ಈ ಕೆಳಗಿನ ಕಳಕಳಿಯ ಮನವಿಯನ್ನು ಮಾಡುತ್ತಿದ್ದೇವೆ. ಪ್ರತಿ ತಿಂಗಳೂ ಮಾನಸ ಆಫೀಸ್ ಬಾಡಿಗೆಗೆಂದು ರೂ. 5-00 ಕಳಿಸಲು ಸಾಧ್ಯವೆ? ಪ್ರತಿ ತಿಂಗಳೂ ಕಳಿಸುವುದು ಸಮಸ್ಯೆಯೆನಿಸಿದರೆ, ಅರ್ಧ ವರ್ಷದ ಅಂದರೆ ರೂ. 30-00 ಅಥವಾ ಒಂದು ವರ್ಷದ ರೂ. 60-00 ಒಟ್ಟಿಗೆ ಕಳಿಸಬಹುದು. ನಮ್ಮ ಈ ಕಿರು ಪ್ರಯತ್ನಕ್ಕೆ ನಿಮ್ಮ ಬೆಂಬಲ ಮತ್ತು ಪ್ರೋತ್ಸಾಹವಿದೆಯೆಂಬ ಭರವಸೆ ನಮಗಿದೆ.

ಸಂ. ಮಂಡಳಿ.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ,
2 | ಬಿ ಮಹಾದೇಶ್ವರ ನಿಲಯ, 2 ನೇ ಮೆನ್. 2 ನೇ ಕ್ರಾಸ್, ಹೊಸಳ್ಳಿ, ವಿಜಯನಗರ, ಬೆಂಗಳೂರು - 40

ನಂ. ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್ : 284 | 8889

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕಾಗ್ಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ: "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು – 560067

ಸೂಚನೆ:
ವಾರ್ಷಿಕ ಚಂದಾ 15 ರೂ.
ಅಜೀವ ಚಂದಾ: 250 ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಆರು ಸಂಚಿಕೆಗಳು
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ, ಮೂಲಕ ಸ್ವೀಕರಿಸಲಾಗುವುದು.